# SADGUNÂDARSHA.

by

**M. P. Pujar**

Kannda Pandit Training College for men Dharwar.

—o—

# ಸದ್ಗುಣಾದರ್ಶ.

**ಮ. ಪ್ರ. ಪೂಜಾರ**

ಕನ್ನಡ ಪಂಡಿತ, ಟ್ರೇನಿಂಗ್‌ಸ್ಕೂಲ್ ಧಾರವಾಡ

ಇವರಿಂದ ಸಂಕಲಿತವಾದುದು.






ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ,
ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು.
ಮಾಳಮಡ್ಡಿ, ಧಾರವಾಡ.

Price 10 annas. ಬೆಲೆ ೧೦ ಆಣೆ.

# ಮುನ್ನುಡಿ.



ಈ ಪುಸ್ತಕವು "ಸತ್ಕಥಾಲಾಪ" ಎಂಬ ನಮ್ಮ ಪುಸ್ತಕದ ೨ನೆಯ ಭಾಗವೆಂದು ಹೇಳಬಹುದು. ಅದರಂತೆ ಈ ಪುಸ್ತಕದಲ್ಲಿಯೂ ಪುರಾಣ-ಇತಿಹಾಸಾದಿಗಳಲ್ಲಿ ಬಂದ ನೀತಿಬೋಧಕವಾದ ಸಂದರ್ಭಗಳನ್ನವಲಂಬಿಸಿ ಚಿಕ್ಕ ಚಿಕ್ಕ ಕಥೆಗಳುಂಟು. ಇವು ಮಕ್ಕಳ ಶೀಲಘಟನೆಗೆ ಸಹಾಯಕವಾಗುವಂತೆ, ಪ್ರವಾಸ ಮೊದಲಾದ ಸಮಯಗಳಲ್ಲಿ ಬೇಸತ್ತ ಮನವನ್ನು ಸೊಗಸುಗೊಳಿಸುವುದಕ್ಕೂ ಸಹಾಯಕವಾಗುವವು. ಮಕ್ಕಳನ್ನು ಬೇಸರಗೊಳಿಸದೆ ಅವರಲ್ಲಿ ವಾಚನಾಭಿರುಚಿಯನ್ನುಂಟುಮಾಡುತ್ತ ಅವರನ್ನು ತಕ್ಕ ಮಾರ್ಗಕ್ಕೆ ತರುವ ಕೆಲಸದಲ್ಲಿ ಈ ಪುಸ್ತಕವು ನೆರವಾಗುವುದೆಂದು ನಂಬಿರುವೆವು.

'ಸತ್ಕಥಾಲಾಪ'ವು ಟೆಕ್ಸ್ಟ್ ಪುಸ್ತಕವೆಂದು ಮಂಜೂರಾಗಿದೆ. ಅದರ ಎಲ್ಲ ಪ್ರತಿಗಳೂ ತೀರಿಹೋಗಿವೆ. ಅದರಂತೆ ಈ ಪುಸ್ತಕವನ್ನೂ ಜನರು ಆದರಿಸುವರೆಂದು ಆಶಿಸುತ್ತೇವೆ.

ಈ ಪುಸ್ತಕದ ಬಹುಭಾಗವು 'ಸುಧಾರಕ' ಎಂಬ ಪ್ರಸಿದ್ಧ ಮಾಸಪತ್ರಿಕೆಯಲ್ಲಿ ಪ್ರಕಟವಾಗುತ್ತ ಬಂದುದರಿಂದ ಕಥಾನುಕ್ರಮಾಂಕಗಳಲ್ಲಿ ಸ್ವಲ್ಪ ಅಕ್ರಮವಾಗಿದೆ. ೬-೧೦ ಅಂಕೆಗಳು ಎರಡು ಬಾರಿ ಬಂದಿವೆ. ಅದರಿಂದ ೧೯ ರ ವರೆಗಿನ ಅಂಕೆಗಳು ತಪ್ಪಿವೆ ಓದುಗರು ಅವುಗಳನ್ನು ತಿದ್ದಿಕೊಳ್ಳಬೇಕೆಂದು ಕೋರುವೆವು.

ಮ॥ ರಾ॥ **ಆರ್. ಕೆ. ನಾಯಿಕ.** ಬಿ. ಎ. ಅಡ್ಮಿನಿಸ್ಟ್ರೇಟಿವ್ ಆಫಿಸರ್ ಡಿ. ಸ್ಕೂ. ಬೋ. ಧಾರವಾಡ ಇವರು ತಮ್ಮ ಸುಧಾರಕದಲ್ಲಿ ಈ ಪುಸ್ತಕಕ್ಕೆ ಇಂಬುಗೊಟ್ಟುದಕ್ಕೆ ಆ ಮಹನೀಯರಿಗೆ ಪ್ರಕೃತ ಲೇಖಕನು ಋಣಿಯಾಗಿರುವನು.

**ಧಾರವಾಡ.**
ಶಕ ೧೮೫೩ ಅಧಿಕ ಆಷಾಢ
ಪೌರ್ಣಿಮೆ.
ತಾ॥ ೩೦-೬-೧೯೩೧.



ಗ್ರಂಥಕರ್ತೃ.

# ಪರಿವಿಡಿ.

## ಅನುಬಂಧ.



---

ಮುದ್ರಣಾಲಯ:—ಶ್ರೀಮಹಾವೀರ ಪ್ರೆಸ್ ಬೆಳಗಾಂವ.
ಮುದ್ರಕರು:—ದೇವೇಂದ್ರಪ್ಪ ಘಡಿಯಪ್ಪ ಚೌಗುಲೆ.
ಪ್ರಕಾಶಕರು:—ಮಹಾದೇವ ಪ್ರಭಾಕರ ಪೂಜಾರ.
ಪ್ರಕಾಶನ ಸ್ಥಲ:—ಲೈನಬಜಾರ, ಧಾರವಾಡ.

ಶ್ರೀ

ಶ್ರೀ ಮಾತಾಪಿತೃಚರಣಾರವಿಂದಗಳಿಗೆ
ಭಕ್ತಿವಿನಮ್ರನಾದ ಲೇಖಕನ
ಕಾಣಿಕೆ.



# ಸದ್ಗುಣಾದರ್ಶ.



ಸುಶಿಕ್ಷಿತೆಯಾದ ರಾಣಿ.

## ೧ ಮೇರೀ ಮಹಾರಾಣಿಯವರು.

ಪಂಚಮ ಜಾರ್ಜಬಾದಶಹರ ಪತ್ನಿಯವರಾದ ಮೇರೀ ರಾಣಿಯವರ ಮೊದಲಿನ ಹೆಸರು 'ಪ್ರಿನ್ಸೆಸ್‌ಮೇ.' ವಿಕ್ಟೋರಿಯಾ ಮಹಾರಾಣಿಯವರು ಇವರನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಮತ್ತು ಇವರು ಒಂದಾನೊಂದು ದಿನ ತಮ್ಮ ಮೊಮ್ಮಗನ ಹೆಂಡತಿಯಾಗಿ ಪಟ್ಟದರಸಿಯಾಗಬೇಕೆಂದು ಅವರು ಬಯಸುತ್ತಿದ್ದರು. ಆ ಮೇರೆಗೆ ಅವರ ಹಿರಿಯ ಮೊಮ್ಮಗನೊಡನೆ ಮದುವೆಯಾಗುವ ಮಾತುಗಳೂ ನಡೆದಿದ್ದುವು. ಆದರೆ ಆತನು ಅಕಾಲದಲ್ಲಿ ಮರಣಹೊಂದಿದುದರಿಂದ. ಎರಡನೆಯ ಮೊಮ್ಮಕ್ಕಳಾದ ಜಾರ್ಜರೊಡನೆ ಇವರ ಮದುವೆಯಾಯಿತು. ಈ ಸಮಯದಲ್ಲಿ ಜರ್ಮನಿಯಲ್ಲಾದ ಕೈಗಾರಿಕೆಯ ಸರಕು ಇಂಗ್ಲಂಡದ ಕೈಗಾರಿಕೆಯ ಸರಕಿಗೆ ವಿಶೇಷವಾಗಿ ಸ್ಪರ್ಧಿಸುತ್ತಿದ್ದುದರಿಂದ ಬ್ರಿಟಿಶ್ ಜನರೆಲ್ಲ ಜರ್ಮನಿಯ ಸರಕನ್ನು ಆದರಿಸುತ್ತಿದ್ದಿಲ್ಲ. ಜರ್ಮನಿಯ ಬಾದಶಹನಾದ ಎರಡನೆಯ ವಿಲಿಯಮನು ಬೋಅರ ಪ್ರೆಸಿಡೆಂಟನಾದ ಕ್ರೂಗರನಿಗೆ ಡಾ. ಜೆಮಿಸನನು ಸೋತಾಗ ಆನಂದ ಪ್ರದರ್ಶನದ ತಂತಿಯನ್ನು ಕಳಿಸಿದ್ದನು. ಇದರಿಂದಲೂ, ಜರ್ಮನಿಯು ಯುದದ ಹಡಗಗಳನ್ನು ಹೆಚ್ಚಿಸಿದುದರಿಂದಲೂ ಜರ್ಮನಿಯು ಇಂಗ್ಲಂಡದ ವಿರೋಧಿಯೆಂದು ಬಹುಜನರಿಗೆ ಗೊತ್ತಾಗಿತ್ತು. ಇನ್ನು ಯುರೋಪದಲ್ಲಿ ಕುಲೀನರಾದ ರಾಜಕನ್ನಿಕೆಯರು ಹೆಚ್ಚಿಗೆ ದೊರೆಯುವುದು ಜರ್ಮನಿಯಲ್ಲಿಯೇ. ಬೇಕಾದಂತಹ ಕನ್ನಿಕೆಯನ್ನು ಆರಿಸಿಕೊಳ್ಳುವುದಕ್ಕೆ ಅಲ್ಲಿಯೇ ಶಕ್ಯವು. ಹೀಗಿದ್ದರೂ ಜರ್ಮನಿಯಂತಹ ಪರದೇಶದ ರಾಜಕುಮಾರಿಯು ಇಂಗ್ಲಂಡದ ಮಹಾರಾಣಿಯಾಗಬಾರದೆಂದು ಎಲ್ಲ ಬ್ರಿಟಿಶಜನರ ಕೋರಿಕೆಯಿತ್ತು. ಸುದೈವದಿಂದ ಬ್ರಿಟಿಶರಿಗೆ ತಮ್ಮ ಯುವರಾಜನಿಗಾಗಿ ಸ್ವದೇಶದ ಕನ್ನಿಕೆಯೇ ದೊರೆತಳು. ಆ ಕನ್ನಿಕೆಯೆಂದರೇ ಪೂಜ್ಯರಾದ ಪ್ರಿನ್ಸೆಸ್ ಮೇರಿಯವರು. ೧೮೯೩ನೆಯ ಜುಲಾಯಿಯಲ್ಲಿ ಯುವರಾಜ ಜಾರ್ಜರವರಿಗೂ, ಪ್ರಿನ್ಸೆಸ್ ಮೇರಿಯವರಿಗೂ ಮದುವೆಯಾಯಿತು.

ಸಾಧಾರಣವಾಗಿ ಎಲ್ಲ ಜನರ ಆ ಕಾಲದ ಮನೋಭಾವವನ್ನರಿತು ಎಲ್ಲರನ್ನೂ ಸಂತೋಷಗೊಳಿಸುವುದಕ್ಕಾಗಿ, ಸ್ವದೇಶಪ್ರೀತಿಯುಳ್ಳ ಬ್ರಿಟಿಶ್ ಅರಸುಮನೆತನದ ಈ ಮದುವೆಯಲ್ಲಿ ಪರದೇಶದ ಯಾವ ಬಟ್ಟೆಗಳೂ ಉಪಯೋಗಿ

ಸಲ್ಪಡಲಿಲ್ಲ; ಇಂಗ್ಲಂಡದ ಸಿಲ್ಕ್, ವೆಲ್ಸದ ಫ್ಲ್ಯಾನೆಲ್, ಸ್ಕಾಟ್ಲಂಡದ ಟ್ವೀಡ್, ಆಯರ್ಲಂಡದ ಲೇಸ್ ಇವೇ ಉಪಯೋಗಿಸಲ್ಪಟ್ಟುವು.

ಮೇರೀ ಮಹಾರಾಣಿಯವರಿಗೆ ಧರ್ಮದಲ್ಲಿ ನಿಷ್ಠೆ ಬಹಳ. ದಿನಾಲು ತಪ್ಪದೆ ಬಾಯ್ಬಲಿನ ಒಂದು ಅಧ್ಯಾಯವನ್ನು ಓದುವುದು ಅವರ ವಾಡಿಕೆ. ಎಲ್ಲ ವಿಷಯಗಳಲ್ಲಿ ಅವರು ಮಿತಭಾವವುಳ್ಳವರು. ಮಹಾರಾಣಿಯವರು ಹಲವು ಭಾಷೆಗಳನ್ನು ಬಲ್ಲರು. ಚಿತ್ರವಿದ್ಯೆ, ಸಂಗೀತ ಇವುಗಳಲ್ಲಿ ಅವರಿಗೆ ನೈಪುಣ್ಯವುಂಟು. ದೇವರ ಪ್ರಾರ್ಥನೆಯ ಪದಗಳನ್ನು ಹಾಡುವುದರಲ್ಲಿ ಅವರಿಗೆ ಪ್ರೀತಿ ಬಹಳ. ತಮ್ಮ ಮಕ್ಕಳಿಗೆ ವಿದ್ಯೆಯನ್ನು ಕಲಿಸುವುದರಲ್ಲಿಯೇ ಅವರು ಬಹಳ ವೇಳೆಯನ್ನು ಕಳೆಯುವರು. ಸ್ವಾಭಾವಿಕ ಲಜ್ಜಾವಿನಯಗಳಿಂದೊಡಗೂಡಿದ ಮೇರೀ ರಾಣಿಯವರಿಗೆ ಹೆಂಗಸರ ಹೊಸ ಬೆಡಗು (ಫ್ಯಾಶನ್) ಸೇರುವುದಿಲ್ಲ. ಅವರ ಉಡಿಗೆತೊಡಿಗೆಗಳು ಗೌರವವನ್ನು ತೋರ್ಪಡಿಸುವಂಥವಿರುವುವು. ಮೈಗೆ ಬಿಗಿಯುವ ಬಟ್ಟೆಗಳನ್ನು ತೊಟ್ಟುಕೊಳ್ಳುವದೂ ಕುದುರೆಯ ಮೇಲೆ ಕುಳಿತು ಬೇಟೆಯಾಡುವುದಕ್ಕೆ ಹೋಗುವುದೂ ಅವರಿಗೆ ಸೇರುವುದಿಲ್ಲ.

ಅವರು ಆಭರಣಗಳನ್ನು ಹೆಚ್ಚಿಗೆ ಇಟ್ಟುಕೊಳ್ಳುವುದಿಲ್ಲ. ಮದುವೆಯ ನಿಶ್ಚಯಕಾಲದಲ್ಲಿ ರಾಜಕುಮಾರರಾದ ಜಾರ್ಜರು ಇಟ್ಟ ವಜ್ರದುಂಗುರವನ್ನೂ, ಮದುವೆಯಾದ ಬಳಿಕ ವ್ಹಿಕ್ಟೋರಿಯಾ ಮಹಾರಾಣಿಯವರು ಕೊಟ್ಟ ರತ್ನಕಂಠಿಯನ್ನೂ ಮಾತ್ರ ಇಟ್ಟುಕೊಳ್ಳುವರು. ಮದುವೆಯ ಕಾಲದಲ್ಲಿ ಇಂಗ್ಲಂಡದ ೨೩ ಕೌಂಟಿ (ಜಿಲ್ಲೆ) ಗಳ ಹೆಂಗಸರು ಪ್ರಾತಿಸ್ವಿಕಧನ (ಚಂದಾಹಣ) ವನ್ನೆತ್ತಿ ಮಾಡಿಸಿ ಕೊಟ್ಟ ೭ ಸಾವಿರ ಗಿನಿ ಬೆಲೆಯ ಮುತ್ತಿನ ಸರವನ್ನೂ, ೧೯೦೫ ರಲ್ಲಿ ಅವರು ಕಲಕತ್ತೆಗೆ ಬಂದಾಗ ಭಾರತಮಹಿಲೆಯರು ಕಾಣಿಕೆಯಾಗಿ ಅರ್ಪಿಸಿದ ಹಾರವನ್ನೂ ಅವರು ಹೆಚ್ಚಿಗೆ ಪ್ರೀತಿಸುವರು.

ಮೇರೀ ಮಹಾರಾಣಿಯವರಿಗೆ ೧೮೯೪ ರ ಜೂನ್ ತಿಂಗಳಲ್ಲಿ ಚೊಚ್ಚಲ ಮಗನು ಹುಟ್ಟಿದನು. ತಮ್ಮ ಮಕ್ಕಳ ಉಡುಪುಗಳು ಇಂಗ್ಲಂಡದಲ್ಲಿ ತಯಾರಾದಂಥವೇ ಇರಬೇಕೆಂಬ ವಿಷಯದಲ್ಲಿ ಇವರು ಎಚ್ಚರಪಡುವರು. ಇವರ ಮಕ್ಕಳು ಪದಾರ್ಥಸಂಗ್ರಹಾಲಯ ಮೊದಲಾದುವನ್ನು ನೋಡುವುದಕ್ಕೆ ಹೋದರೆ ಇತರರಂತೆ ಟಿಕೇಟುಗಳನ್ನು ಕೊಂಡುಕೊಂಡು ಒಳಗೆ ಪ್ರವೇಶಿಸುವರು. ಬಾಲ್ಯದಲ್ಲಿಯೇ ಇಲ್ಲದ ಪ್ರೀತಿಮರ್ಯಾದೆಗಳನ್ನು ಮಾಡಿ ಅವರ ಮನುಷ್ಯತ್ವವನ್ನು ಹೋಗಲಾಡಿಸುವುದಕ್ಕೆ ಇವರು ಆಸ್ಪದವನ್ನು ಕೊಟ್ಟಿಲ್ಲ.

ಮಹಾರಾಣಿಯವರ ಮಗಳಾದ ಜುಬಿಲಿ ಎಂಬ ರಾಜಕುಮಾರಿಯು (ಜನ್ನ ಗರ್ಲಿ.) ಬಾಲ್ಯದಲ್ಲಿ ಒಂದು ದಿನ ತಾಯಿಗೆ—ನೀನು ಬೊಂಬೆಗಳ ನ್ನಿಟ್ಟುಕೊಂಡು ಏಕೆ ಆಡುವುದಿಲ್ಲ ಎಂದು ಕೇಳಿದಳು. ಅದಕ್ಕೆ ಮಹಾರಾಣಿ ಯವರು ನಕ್ಕು—ಮಗಳೇ, ನನ್ನ ಬೊಂಬೆಗಳು ಕೂಡಿಸಿದಲ್ಲೇ ಕೂಡುವುವಲ್ಲ; ಅತ್ತಿತ್ತ ಸಂಚರಿಸುತ್ತವೆ; ನಗುತ್ತವೆ; ಮಾತಾಡುತ್ತವೆ; ತಮ್ಮ ತಾಯಿಯನ್ನು ಬಹಳ ಪ್ರೀತಿಸುತ್ತವೆ. ಮಗಳೇ, ನೀವೇ ನನ್ನ ಬೊಂಬೆಗಳಲ್ಲವೇ ಎಂದು ಹೇಳಿ ಮುದ್ದಿಸಿದರು. ಮಹಾರಾಣಿಯವರು ಪಟ್ಟಾಭಿಷೇಕಕ್ಕಾಗಿ ಪಂಚಮಜಾರ್ಜ ಪ್ರಭುಗಳೊಡನೆ ಒಂದೇ ರಥದಲ್ಲಿ ಕುಳಿತುಕೊಂಡು ನಡೆದಾಗ ತಮ್ಮನ್ನು ಕುರಿತು ಜಯಜಯಕಾರ ಮಾಡುವ ಪ್ರಜೆಗಳನ್ನು ಚೆನ್ನಾಗಿ ನೋಡುವುದಕ್ಕೋಸ್ಕರ ರಥದಲ್ಲಿ ಎದ್ದು ನಿಂತಿದ್ದರು. ಈ ಮೇರೆಗೆ ಎದ್ದು ನಿಲ್ಲುವುದು ರಾಜಮರ್ಯಾ ದೆಯ ನಿಯಮಗಳಿಗೆ ವಿರುದ್ಧವಾದುದು. ಆದರೆ ಅದರಿಂದ ತಮ್ಮ ದೇಶದ ರಾಣಿಯ ವಿಷಯವಾಗಿ ಪ್ರಜೆಗಳು ಹೆಚ್ಚಿಗೆ ಸಹಾನುಭೂತಿಯುಳ್ಳವರಾದರೆಂಬು ದರಲ್ಲಿ ಸಂಶಯವಿಲ್ಲ.

---

ವಿದ್ಯೆಯ ಗೌರವ.

## ೨ ವಿಕ್ರಮಾದಿತ್ಯನೂ ಕಾಲಿದಾಸನೂ.

ಮಹಾಕವಿ ಕಾಲಿದಾಸನು ಒಂದಾನೊಂದು ದಿವಸ ತನ್ನ ಮನೆಯಲ್ಲಿ ಮಗನಿಗೆ ಈ ಶ್ಲೋಕವನ್ನು ಹೇಳುತ್ತ ಕುಳಿತುಕೊಂಡಿದ್ದನು:—

ವಿದ್ವತ್ವಂ ಚ ನೃಪತ್ವಂ ಚ ನೈವ ತುಲ್ಯಂ ಕದಾಚನ ।
ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ ॥

[ ಅರ್ಥ—ವಿದ್ವಾಂಸನು ಮತ್ತು ಅರಸನು ಇವರಲ್ಲಿ ವಿದ್ವಾಂಸನೇ ಬಹು ಮಾನ್ಯನು. ಅರಸನು ತನ್ನ ರಾಜ್ಯದಲ್ಲಿ ಮಾನ್ಯನು, ಆದರೆ ವಿದ್ವಾಂಸನಿಗೆ ಎಲ್ಲ ಕಡೆಯಲ್ಲಿ ಮರ್ಯಾದೆ ದೊರೆಯುವುದು. ] ಆಗ ವಿಕ್ರಮಾದಿತ್ಯ ಮಹಾರಾಜನು ಅಲ್ಲಿಗೆ ಬಂದನು. ಕಾಲಿದಾಸನು ಮಹಾರಾಜನನ್ನು ತಕ್ಕ ಮರ್ಯಾದೆಮಾಡಿ ಕುಳ್ಳಿರಿಸಿ ಮತ್ತೆ ಮತ್ತೆ ಅದೇ ಶ್ಲೋಕವನ್ನೇ ಹೇಳಲಾರಂಭಿಸಿದನು. ಇದನ್ನು ಕಂಡು ವಿಕ್ರಮಾದಿತ್ಯನು, ನಾನು ಅರಸನು, ಕಾಲಿದಾಸನು ವಿದ್ವಾಂಸನು; ಕಾಲಿ ದಾಸನು ನನಗಿಂತ ತಾನು ಹೆಚ್ಚಿನವನೆಂದು ತೋರಿಸಿಕೊಳ್ಳುತ್ತಿದ್ದಾನೆ; ಆದರೆ ನನ್ನ ಆಶ್ರಯದಿಂದಲೇ ಅಲ್ಲವೇ ಇವನಿಗಿಷ್ಟು ಮರ್ಯಾದೆ? ಎಂದು ಭಾವಿಸಿ ಕೊಂಡನು.

ಅರಸನು ತನ್ನ ಮನೆಗೆ ಹೋದಕೂಡಲೆ ಕಾಲಿದಾಸನಿಗೆ ಈ ವರೆಗೆ ಕೊಟ್ಟ ಸಂಪತ್ತಿಯನ್ನೆಲ್ಲ ಸರಕಾರಕ್ಕೆ ಸೇರಿಸಬೇಕೆಂದು ತನ್ನ ಅಮಾತ್ಯರಿಗೆ ಅಪ್ಪಣೆಮಾಡಿದನು. ಅಪ್ಪಣೆಯಂತೆ ಕೆಲಸವು ನಡೆದು ಹೋಯಿತು. ಕಾಲಿದಾಸನು ಆ ರಾಜ್ಯವನ್ನು ಬಿಟ್ಟು ಆ ದೇಶ, ಈ ದೇಶಗಳನ್ನು ಸಂಚರಿಸುತ್ತ ಕೊನೆಗೆ ಕರ್ನಾಟಕದ ರಾಜನಲ್ಲಿಗೆ ಬಂದನು.

ಕನ್ನಡನಾಡಿನ ಅರಸರು ಯಾವಾಗಲೂ ವಿದ್ಯಾಭಿಮಾನಿಗಳೂ, ಗುಣಗ್ರಾಹಿಗಳೂ. ಆ ಕಾಲದಲ್ಲಿ ಬಿಲ್ಹಣಕವಿಯು ಕರ್ನಾಟಕರಾಜನ ಆಸ್ಥಾನದ ಪ್ರಥಮ ಪಂಡಿತನಾಗಿದ್ದನು. ಅರಸನನ್ನು ಕಾಣಬೇಕೆಂದು ಬಯಸುವ ಪಂಡಿತರು ಮೊದಲು ಬಿಲ್ಹಣಕವಿಯನ್ನು ಕಾಣುವ ವಾಡಿಕೆಯಿತ್ತು. ಬಿಲ್ಹಣನು, ಬಂದ ಪಂಡಿತನು ತಕ್ಕವನೆಂದು ಕಂಡುಬಂದರೆ ಅರಸನನ್ನು ಕಾಣುವ ಯೋಗವನ್ನು ಒದಗಿಸಿಕೊಡುತ್ತಿದ್ದನು. ತನಗಿಂತ ಶ್ರೇಷ್ಠ ವಿದ್ವಾಂಸರು ಬಂದರೆ ತನ್ನ ಗೌರವವು ಕಡಿಮೆಯಾದೀತೆಂಬ ಸಂಶಯದಿಂದ ಅಂಥವರನ್ನು ಅರಸನ ದರ್ಶನಕ್ಕೆ ಹೋಗಗೊಡುತ್ತಿರಲಿಲ್ಲ. ಕಾಲಿದಾಸನು ಕರ್ಣಾಟರಾಜನನ್ನು ಕಾಣಬೇಕೆಂದು ಬಯಸಿ ಮೊದಲು ಬಿಲ್ಹಣನ ಬಳಿಗೆ ಹೋಗಿ, ಇಲ್ಲಿ ತನ್ನ ವಿದ್ವತ್ತೆಯನ್ನು ತೋರ್ಪಡಿಸಿದರೆ ಈತನು ರಾಜದರ್ಶನಕ್ಕೆ ವಿಘ್ನಮಾಡುವನೆಂದು ತಿಳಿದು ಸ್ವಲ್ಪ ಮೂರ್ಖತೆಯನ್ನೇ ತೋರಿಸಿದನು. ಬಿಲ್ಹಣನು ಕಾಲಿದಾಸನನ್ನು ಕುರಿತು—ರಾಜದರ್ಶನವನ್ನು ಅಪೇಕ್ಷಿಸುತ್ತಿದ್ದರೆ ಶ್ಲೋಕಗಳನ್ನು ರಚಿಸಬಲ್ಲೆಯಾ ಎಂದು ಕೇಳಿದನು. ಕಾಲಿದಾಸನು—ನಾನು ವ್ಯಾಕರಣವನ್ನು ಸ್ವಲ್ಪ ಓದಿದವನು; ಶ್ಲೋಕವನ್ನು ಹೇಗೆ ರಚಿಸಬೇಕೆಂಬುದನ್ನು ಹೇಳಿದರೆ ಪ್ರಯತ್ನಮಾಡಿ ನೋಡುವೆನು ಎಂದನು. ಬಿಲ್ಹಣನು—ನಾಲ್ಕು ಪಾದಗಳುಳ್ಳ ಒಂದು ಸರಸ ವಾಕ್ಯವನ್ನು ರಚಿಸು, ನೋಡುವ ಎಂದನು. ಆಗ ಕಾಲಿದಾಸನು—'ದುಗ್ಧಂ ಪಿಬತಿ ಬಿಡಾಲಃ' ಎಂದನು. ಬಿಲ್ಹಣನು—ಇದೆಂತಹ ಶ್ಲೋಕವು? ನಾಲ್ಕು ಚರಣಗಳೆಲ್ಲಿ? ಮಾಧುರ್ಯವೆಲ್ಲಿ ಎಂದನು. ಕಾಲಿದಾಸನು--ಬಿಡಾಲಃ (ಬೆಕ್ಕು) ಎಂಬ ಒಂದು ಶಬ್ದದಿಂದಲೇ ನಾಲ್ಕು ಪಾದಗಳನ್ನು ಸಾಧಿಸಿರುವೆನು; ಬಿಡಾಲಕ್ಕೆ ನಾಲ್ಕು ಪಾದಗಳಲ್ಲವೇ? ದುಗ್ಧದಲ್ಲಿ (ಹಾಲಿನಲ್ಲಿ) ಮಾಧುರ್ಯವಿರುವುದರಿಂದ ಮಧುರ ರಸವನ್ನೂ ಸಾಧಿಸಿದ್ದೇನೆ ಎಂದನು. ಬಿಲ್ಹಣನು ನಕ್ಕು-- ಹೀಗೆ ನಾಲ್ಕು ಪಾದಗಳಲ್ಲ; ಒಂದು ಸಣ್ಣ ಶ್ಲೋಕವನ್ನು ಅಂದು ತೋರಿಸಿ ಹೀಗೆ ನಾಲ್ಕು ಪಾದಗಳೂ,

ಪ್ರತಿಪಾದಕ್ಕೆ ಇಂತಿಷ್ಟು ಅಕ್ಷರಗಳೂ ಇರಬೇಕೆಂದೂ, ದೂರಾನ್ವಯವಾದರೂ ಅಡ್ಡಿಯಿಲ್ಲವೆಂದೂ, ಅಕ್ಷರಗಳು ಕಡಿಮೆಯಾದರೆ ಚ, ವೈ; ತು, ಹಿ ಎಂಬ ಅವ್ಯಯಗಳನ್ನು ಪಾದಪೂರಣಕ್ಕಾಗಿ ಸೇರಿಸಬಹುದೆಂದೂ ಹೇಳಿದನು. ಕಾಲಿದಾಸನು ಮರುದಿನ ಬಂದು ಬಿಲ್ಹಣನ ಬಳಿಯಲ್ಲಿ ಈ ಶ್ಲೋಕವನ್ನು ಹೇಳಿದನು.

ಉತ್ತಿಷ್ಠೋತ್ತಿಷ್ಠ ರಾಜೇಂದ್ರ ಮುಖಂ ಪ್ರಕ್ಷಾಲಯಸ್ವ ಟಃ ।
ರೌತಿ ತೇ ನಗರೇ ಕುಕ್ಕು ಚವೈತುಹಿ ಚವೈತುಹಿ ॥

[ ಅರಸನೇ ಏಳು, ಮುಖಪ್ರಕ್ಷಾಲನ ಮಾಡು; ನಿನ್ನ ನಗರದಲ್ಲಿ ಕೋಳಿಯು ( ಕುಕ್ಕು + ಟಃ ) ಕೂಗುತ್ತಿದೆ. ] ಕುಕ್ಕುಟಃ ಎಂಬ ಒಂದೇ ಪದದಲ್ಲಿ ಎರಡು ಭಾಗ ಮಾಡಿ ಟಃ ಎಂಬುದನ್ನಷ್ಟೇ ಒಂದು ಚರಣದಲ್ಲಿಯೂ, ಕುಕ್ಕು ಎಂಬುದನ್ನು ಮುಂದೆ ಇನ್ನೊಂದು ಚರಣದಲ್ಲಿಯೂ ಉಪಯೋಗಿಸಿರುವ ಈ ದೂರಾನ್ವಯದ ಚಮತ್ಕಾರವನ್ನು ಅರಸನಿಗೆ ತೋರಿಸಿ ಈ ಮರುಳ ಕವಿಗೆ ಏನಾದರೂ ಸ್ವಲ್ಪ ಸಂಭಾವನೆ ಕೊಡಿಸಬೇಕೆಂದು ಬಿಲ್ಹಣನು ಆ ಶ್ಲೋಕವನ್ನು ಬರೆದಿದ್ದ ಕಾಗದವನ್ನು ಕೈಯಲ್ಲಿ ಹಿಡಿದುಕೊಂಡು ಕಾಲಿದಾಸನೊಡನೆ ರಾಜಸಭೆಗೆ ಬಂದನು

ಬಿಲ್ಹಣನು ಅರಸನಿಗೆ ನಿನ್ನ ಅಭ್ಯುದಯವಾಗಲಿ ಎಂದು ಆಶೀರ್ವಾದ ಮಾಡಿದನು. ಅರಸನು-ಬಿಲ್ಹಣ ಕವಿಯೇ, ಕೈಯೊಳಗಿನದೇನು? ಬಿಲ್ಹಣ-ಶ್ಲೋಕವು; ಅರಸ—ಯಾರದು? ಬಿಲ್ಹಣ—( ಕಾಲಿದಾಸನ ಕಡೆಗೆ ಬೆರಳುಮಾಡಿ ) ಈ ಕವಿಯದು. ಅರಸು—( ಕಾಲಿದಾಸನನ್ನು ಕುರಿತು ) ತಾವು ಮಾಡಿದುದೋ? ಕಾಲಿದಾಸ—ಅಹುದು; ಅರಸು—ಹಾಗಾದರೆ ಹೇಳಿರಿ, ಕಾಲಿದಾಸ—ಹೇಳುವೆನು. ಈ ಮೂವರ ಪ್ರಶ್ನೋತ್ತರಗಳಿಂದ ಒಂದು ಶ್ಲೋಕದ ಅರ್ಧವಾಯಿತು: —

ರಾಜನ್ನಭ್ಯುದಯೋಸ್ತು; ಬಿಲ್ಹಣಕವೇ ಹಸ್ತೇ ಕಿಮಾಸ್ತೇ ತವ? ।
ಶ್ಲೋಕಃ; ಕಸ್ಯ? ಕವೇರಮುಷ್ಯ; ಭವತೋ? ಹುಂ; ಪಠ್ಯತಾಂ; ಪಠ್ಯತೇ ॥

ಕಾಲಿದಾಸನು ಶ್ಲೋಕವನ್ನು ಹೇಳುವೆನೆಂದು ನುಡಿದು ಮೊದಲು ಈ ಶ್ಲೋಕಾರ್ಧವನ್ನೇ ಪೂರ್ತಿಮಾಡಿ ತನ್ನ ಕವಿತ್ವಶಕ್ತಿಯನ್ನು ತೋರ್ಪಡಿಸಿದನು.

ಕಿಂ ತ್ವಾಸಾಮರವಿಂದಸುಂದರದೃಶಾಂ ದ್ರಾಕ್ ಚಾಮರಾಂದೋಲನಾ ।
ದುದ್ವೇಲ್ಲದ್ಭುಜವಲ್ಲಿ ಕಂಕಣಝಣತ್ಕಾರಃ ಕ್ಷಣಂ ವಾರ್ಯತಾಂ ॥

[ ಅರ್ಥ—ಶ್ಲೋಕವನ್ನು ಹೇಳುವೆನು; ಆದರೆ ತಾವರೆಯಂತೆ ಅಂದವಾದ ಕಣ್ಣುಗಳುಳ್ಳ ಈ ಸುಂದರಿಯರು ತೋಳುಗಳನ್ನು ನೆಗಪಿ ಚಾಮರಗಳನ್ನು ಬೀಸು

ವಾಗ ಆಗುವ ಮುಂಗೈಬಳೆಗಳ ಝಣತ್ಕಾರವು ಸ್ವಲ್ಪ ಹೊತ್ತು ನಿಲ್ಲಲಿ.]
ಕಾಲಿದಾಸನ ಬಾಯಿಂದ ದೂರಾನ್ವಯದ "ಕುಕ್ಕು" ಶ್ಲೋಕಕ್ಕೆ ಪ್ರತಿಯಾಗಿ
ಈ ಸರಸವಾಕ್ಪ್ರವಾಹವು ಹೊರಡುತ್ತಿರುವುದನ್ನು ಕಂಡು ಬಿಲ್ಹಣಕವಿಯು ಬೆರ
ಗಾಗಿ ನಿಂತನು.

ಬಳಿಕ ಕಾಲಿದಾಸನು "ಶ್ರೀಮನ್ನಾಥ ತವಾನನೇ ಭಗವತೀ ವಾಣೀ ನರೀ
ನೃತ್ಯತಿ" ಮೊದಲಾಗಿ ಹೇಳಿದ ಎಂಟು ಶ್ಲೋಕಗಳು "ಕರ್ಣಾಟಾಷ್ಟಕ"
ಎಂದು ಪ್ರಸಿದ್ಧವಾಗಿವೆ. ಅವುಗಳನ್ನು ಕೇಳುವಾಗ ಅರಸನು ಅತ್ಯಂತ ಸಂತುಷ್ಟ
ನಾಗಿ ಎರಡೆರಡು ಶ್ಲೋಕಗಳಾದ ಬಳಿಕ ಒಂದೊಂದು ದಿಕ್ಕಿನ ಕಡೆಗೆ ನೋ
ಡುತ್ತ ಇದ್ದನು. ರಾಜ್ಯದ ಆ ಆ ದಿಕ್ಕುಗಳನ್ನು ಕವಿಗೆ ದಾನಕೊಟ್ಟೆನೆಂದು
ಆತನ ಭಾವನೆ. ಆದರೆ ಕಾಲಿದಾಸನು ಅರಸನ ಈ ಭಾವವನ್ನು ತಿಳಿಯದೆ,—
ಅರಸನು ತನಗೆ ಸಂಭಾವನೆ ಕೊಡಲು ಹಿಂದುಮುಂದೆ ನೋಡುತ್ತಾನೆಂದು
ಭಾವಿಸಿ ಕೆಳಗಿನ ಶ್ಲೋಕವನ್ನು ನುಡಿದನು.

ಮಾಗಾಃ ಪ್ರತ್ಯುಪಕಾರಕಾತರತಯಾ ವೈಮುಖ್ಯಮಾಕರ್ಣಯ ।
ರೇ ಕರ್ಣಾಟವಸುಂಧರಾಧಿಪ ಸುಧಾಸಿಕ್ತಾನಿ ಸೂಕ್ತಾನಿ ಮೇ ॥
ವರ್ಣ್ಯಂತೇ ಕತಿ ಭೂಧರಾರ್ಣವ ನದೀ ಭೂಗೋಲ ವಿಂಧ್ಯಾಟವೀ ।
ಝುಂಝೂಮಾರುತ ಚಂದ್ರಮಃ ಪ್ರಭೃತಯಸ್ತೇಭ್ಯಃ ಕಿಮಾಪ್ತಂ ಮಯಾ ? ॥

ಅರ್ಥ—ಕರ್ಣಾಟರಾಜನೇ, ಪ್ರತ್ಯುಪಕಾರ ಮಾಡಬೇಕಾಗುವುದೆಂಬ
ಅಂಜಿಕೆಯಿಂದ ಮೋರೆಯು ತಿರುವಬೇಡ. ಅಮೃತವೆರಚಿದ ನನ್ನ ಸವಿನುಡಿಗಳ
ನ್ನಾಲಿಸು; ನಾವು ಹಲವು ಪರ್ವತ, ಸಮುದ್ರ, ನದಿ, ಭೂಮಿ, ಗಿರಿ, ವನ,
ಮಾರುತ, ಚಂದ್ರಮ ಮೊದಲಾದವರನ್ನು ವರ್ಣಿಸುವೆವು; ಅವರಿಂದ ನಮಗೇ
ನಾದರೂ ದ್ರವ್ಯವು ದೊರೆತಿದೆಯೋ?

ಆಗ ಕರ್ಣಾಟರಾಜನು—ನಿನಗೆ ಸರ್ವಸ್ವವನ್ನು ಕೊಟ್ಟರೂ ನನ್ನ ತೃಪ್ತಿ
ಯಾಗದೆಂದು ಹೇಳಿದನು. ಮತ್ತು ಕಾಲಿದಾಸನನ್ನು ಬಹಳವಾಗಿ ಸತ್ಕರಿಸಿ
ವಿಪುಲವಾಗಿ ಸಂಭಾವನೆಯನ್ನು ಕೊಟ್ಟು ತನ್ನ ಆಶ್ರಯದಲ್ಲಿಟ್ಟುಕೊಂಡನು.

ಇತ್ತ ವಿಕ್ರಮಾದಿತ್ಯನ ಮನಸ್ಸಿಗೆ ಕಾಲಿದಾಸನಿಲ್ಲದೆ ಸೊಗಸಾಗದಂತಾ
ಯಿತು. ರಾಜಕಾರ್ಯಗಳನ್ನು ಮಾಡಿ ಬೇಸತ್ತಾಗ ಕಾಲಿದಾಸನೊಡನೆ ಕಾವ್ಯಾ
ಲಾಪಗಳಿಂದ ವಿನೋದಬಡುತ್ತಿದ್ದನು. ಈಗ ಆ ದಿವ್ಯಸುಖವು ಇಲ್ಲದಂತಾ
ಯಿತು. ಆದುದರಿಂದ ಆತನು ಕಾಲಿದಾಸನನ್ನು ಹುಡುಕಿ ಮತ್ತೆ ಕರೆತರಬೇ

ಕೆಂದು ನಿಶ್ಚಯಿಸಿ ವೇಷವನ್ನು ಮರೆಮಾಡಿಕೊಂಡು ದೇಶದೇಶಗಳನ್ನು ತಿರುಗುತ್ತ ಕೊನೆಗೆ ಕರ್ನಾಟಕದ ರಾಜಧಾನಿಗೆ ಬಂದನು. ಆಗ ವಿಕ್ರಮನ ಬಳಿಯಲ್ಲಿ ತನ್ನ ಒಂದು ಉಂಗುರದ ಹೊರತು ಇನ್ನೇನೂ ಇರಲಿಲ್ಲ. ಆದುದರಿಂದ ಅದನ್ನು ಅಂಗಡಿ ಬೀದಿಗೆ ಹೋಗಿ ಮಾರುತ್ತಿರಲು ಅರಸರಿಗೆ ತಕ್ಕ ಆ ಅಮೌಲ್ಯವಾದ ಉಂಗುರವು ಒಬ್ಬ ನಾಡಾಡಿ ಮನುಷ್ಯನ ಬಳಿಯಲ್ಲಿರುವುದನ್ನು ಕಂಡು ರಾಜಸೇವಕರು ಈತನು ಕಳ್ಳನಿರಬಹುದೆಂಬ ಸಂಶಯದಿಂದ ಅತನನ್ನು ಹಿಡಿದು ಅರಸನೋಲಗಕ್ಕೆ ತಂದರು. ಅಲ್ಲಿ ವಿಕ್ರಮಾದಿತ್ಯನು ನೋಡುತ್ತಾನೆ—ಕಾಲಿದಾಸನು ಕರ್ಣಾಟ ಮಹೀಪಾಲನೊಡನೆ ಏಕಾಸನದಲ್ಲಿ ವಿರಾಜಿಸುತ್ತಿದ್ದಾನೆ.! ಆಗ ವಿಕ್ರಮಾದಿತ್ಯನು ದೊಡ್ಡ ದನಿಯಿಂದ–ಕವಿವರ್ಯ ಕಾಲಿದಾಸನೇ, ನೀನು ಹೇಳಿದ "ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ" ಎಂಬ ಮಾತು ಈಗ ನನಗೆ ಒದಗಿರುವ ಅವಸ್ಥೆಯಿಂದ ಸ್ಫುಟವಾಗಿ ಸಿದ್ಧವಾಗುತ್ತಿದೆ. ನಾನು ನಿನ್ನನ್ನು ಅಧಿಕಾರಮದದಿಂದ ಅಪಮಾನಗೊಳಿಸಿದುದು ಅನ್ಯಾಯ್ಯವಾಯಿತು ಎಂದು ನುಡಿದನು.

ಆಗ ಕನ್ನಡ ನಾಡಿನ ಅರಸನು ಆರೋಪಿಯು ವಿಕ್ರಮಾದಿತ್ಯರಾಜನೆಂದರಿತು ಆತನಿಗೆ ತಕ್ಕ ಸಂಮಾನವನ್ನು ಮಾಡಿ ಉಪಚರಿಸಿದನು. ವಿಕ್ರಮಾದಿತ್ಯನು ಕಾಲಿದಾಸನನ್ನು ಬರಮಾಡಿಕೊಂಡು ತನ್ನ ರಾಜ್ಯಕ್ಕೆ ತೆರಳಿದನು.

---

ಕರ್ತವ್ಯಪಾಲನ

## ೩ ಕ್ಷ.

ಮಾರ್ಸ್ಟನ್‌ಮೂರ್ ಯುದ್ಧದಲ್ಲಿ ಸೇನಾಪತಿಯಾದ 'ಸಿಡ್ನಿ'ಯು ಗಾಯಹೊಂದಿ ನೆಲಕ್ಕುರುಳಲು ಒಬ್ಬ ಸವಾರನು ತಮ್ಮ ಸೇನಾಪತಿಯನ್ನು ಆಕ್ರಮಿಸ ಬಂದಿದ್ದ ಶತ್ರುಗಳನ್ನೋಡಿಸಿ ಆತನನ್ನು ತನ್ನ ಕುದುರೆಯ ಮೇಲೆ ಹಾಕಿಕೊಂಡು ಕೂಡಲೆ ಸೇನೆಯ ಹಿಂಭಾಗದ ನಿರ್ಭಯ ಸ್ಥಳಕ್ಕೆ ಒಯ್ದನು. ಸಿಡ್ನಿಯು ಕೃತಜ್ಞತೆಯಿಂದ ನಿನ್ನ ಹೆಸರೇನೆಂದು ಆ ಸವಾರನನ್ನು ಕೇಳಿದನು. ಆಗ ಆತನು—ನಾನು ಲಾಭದ (ಆಡತಿಯ) ಆಶೆಗಾಗಿ ಈ ಕೆಲವನ್ನು ಮಾಡಿಲ್ಲ; ಹೆಸರನ್ನು ಹೇಳದಿರುವದಕ್ಕೆ ನನ್ನನ್ನು ಕ್ಷಮಿಸಿರಿ ಎಂದು ವಿನಯದಿಂದ ಹೇಳಿ ಆಗಲೇ ಯುದ್ಧಕ್ಕೆ ಹೊರಟು ಹೋದನು. ಮುಂದೆ ಎಷ್ಟು ಶೋಧ ಮಾಡಿದರೂ ಆ ಸಿಪಾಯನು ಕರ್ಮನಿಷ್ಠ ಸೈನಿಕನು ಯಾರೆಂಬುದು ಸಿಡ್ನಿಗೆ ಎಂದೂ ತಿಳಿಯಲಿಲ್ಲ.

---

ನಾಲ್ಕು ರತ್ನಗಳು.

## ೪ ಅಫ್ಲಾತೂನನ ಉಪದೇಶ.

ಮಹಾತ್ಮನಾದ ಅಫ್ಲಾತೂನನು (ಪ್ಲೇಟೋ) ತನ್ನ ಮರಣ ಕಾಲದಲ್ಲಿ ಮಕ್ಕಳನ್ನು ಕುರಿತು ನಾಲ್ಕು ಮಾತುಗಳನ್ನು ಉಪದೇಶಿಸಿದನು. ಅವುಗಳಲ್ಲಿ ಎರಡು ಮಾತುಗಳು ಏನನ್ನು ಮರೆಯಬೇಕೆಂಬುದನ್ನೂ ಎರಡು ಮಾತುಗಳು ಏನನ್ನು ನೆನಪಿನಲ್ಲಿಡಬೇಕೆಂಬುದನ್ನೂ ಬೋಧಿಸುವುವಾಗಿವೆ.

೧ ಪರರು ನಿಮಗೆ ವಿರೋಧವಾಗಿ ಏನನ್ನು ಮಾಡಿರುವರೋ ಏನನ್ನು ಆಡಿರುವರೋ ಅದನ್ನು ಮರೆಯಿರಿ. (=ಕ್ಷಮೆ)

೨ ನೀವು ಪರರಿಗೆ ಏನಾದರೂ ಒಳಿತನ್ನು ಮಾಡಿದ್ದರೆ ಅದನ್ನು ಮರೆಯಿರಿ (= ನಿರಹಂಕಾರ.)

೩ ಎಂದಾದರೂ ಒಂದು ದಿವಸ ಸಾಯಲೇಬೇಕೆಂಬುದನ್ನು ನೆನಪಿನಲ್ಲಿಡಿರಿ. (=ವೈರಾಗ್ಯ.)

೪ ಸರ್ವ ತಂತ್ರಸ್ವತಂತ್ರನಾದ ಪರಮೇಶ್ವರನೊಬ್ಬನಲ್ಲದೆ ಯಾವ ಮಾನವನೂ ನಮ್ಮ ಒಳಿತನ್ನಾಗಲಿ ಕೇಡನ್ನಾಗಲಿ ಮಾಡಲಾರನೆಂಬುದನ್ನು ಯಾವಾಗಲೂ ನೆನಪಿನಲ್ಲಿಡಿರಿ. (=ದೇವರಲ್ಲಿ ವಿಶ್ವಾಸ.)

---

ವಿದ್ವಾಂಸರಿಗೆ ಸಮ್ಮಾನ

## ೫ ಹಾರುನ ಅಲ್‌ರಸಿದ.

ಖಲೀಫನಾದ ಹಾರುನ್ ಅಲ್‌ರಸಿದನು ಒಂದು ದಿವಸ ಆಬುಮಾರಿಯಾ ಎಂಬ ಒಬ್ಬ ದೊಡ್ಡ ವಿದ್ವಾಂಸನನ್ನು ತನ್ನ ಮನೆಗೆ ಊಟಕ್ಕೆ ಕರೆದನು. ಆಬೂಮಾರಿಯನು ಕುರುಡನು. ಎಡೆಗಳಲ್ಲಿ ಎಲ್ಲ ಪದಾರ್ಥಗಳನ್ನು ಬಡಿಸಿದ ಬಳಿಕ ಹಾರುನನು ಆಬುಮಾರಿಯನ ಕೈಗಳನ್ನು ತಾನೇ ತೊಳೆದನು. ಆಗ ಆಬುಮಾರಿಯನು ನನ್ನ ಕೈಗಳನ್ನಾರು ತೊಳೆಸಿದರು ಎಂದು ಕೇಳಲು ಖಲೀಫನು ನಾನೇ ಎಂದು ಹೇಳಿದನು. ಆಗ ಆಬುಮಾರಿಯನು ಅತ್ಯಂತ ಆಶ್ಚರ್ಯಬಟ್ಟು ಆನಂದದಿಂದ-ಒಡೆಯರೇ, ತಾವು ಆಲಮಾ (ವಿದ್ವಾಂಸ)ಗಳ ವಿಷಯವಾಗಿ ಇಷ್ಟುಮಟ್ಟಿಗೆ ಸಮ್ಮಾನವನ್ನು ಇಟ್ಟುಕೊಂಡಿರುವಿರಾ? ಎಂದು ಕೃತಜ್ಞತೆಯನ್ನು ತೋರ್ಪಡಿಸಿದನು.

ನಮ್ಮ ದೇಶದಲ್ಲಿ ಬ್ರಾಹ್ಮಣ ಮೊದಲಾದ ಕೆಲವು ಜಾತಿಗಳಲ್ಲಿ ಮನೆಗೆ ಕರೆದ ಅತಿಥಿಗಳ ಪಾದಗಳನ್ನು ಮನೆಯ ಮುಖ್ಯ ಮನುಷ್ಯನು ತೊಳೆದು ಸತ್ಕರಿಸುವ ವಾಡಿಕೆಯು ಈಗಲೂ ಉಂಟು.

---

ಒರ್ವ ನೇ ಕೋಟಗೀತರಕ್ಕ. **೬ ಲಾಟುರ್ ಅವ್ಹಾರ್ನ.**

ಲಾಟುರ್ ಅವ್ಹಾರ್ನನು ಫ್ರೆಂಚ ಗ್ರೇನೇಡಿಯರ್ ಸೈನ್ಯದ ಮುಖ್ಯಾಧಿಕಾರಿಯು. ಆದರೆ ಇದಕ್ಕೂ ಹೆಚ್ಚಿನ ಅಧಿಕಾರಕ್ಕೆ ವರಿಷ್ಠರು ಹಲವುಸಾರೆ ಕೇಳಿದ್ದರೂ **ಗ್ರೇನೇಡಿಯರ್ ಕ್ಯಾಪ್ಟನ್** ಅಧಿಕಾರಕ್ಕಿಂತ ಹೆಚ್ಚಿನ ಪದವಿಯನ್ನು ಆತನು ಅಪೇಕ್ಷಿಸಲಿಲ್ಲ. ಒಮ್ಮೆ ಬಳಗದವರನ್ನು ಕಂಡುಬರಲೋಸುಗ ಆತನು ರಜೆಯನ್ನು ಪಡೆದುಕೊಂಡು ಹೋಗಿದ್ದನು. ಅಲ್ಲಿ ಒಂದು ದಿನ ಒಬ್ಬನೇ ತಿರುಗಾಡುತ್ತ ಹೊರಟಾಗ ಆಸ್ಟ್ರಿಯನ್ ಸೈನ್ಯದ ಒಂದು ತುಕಡಿಯು ನೆರೆಯ ಗುಡ್ಡದ ದಾರಿಗುಂಟ ವೇಗವಾಗಿ ಬರುತ್ತಿರುವ ಸುದ್ದಿಯನ್ನು ಕೇಳಿದನು. ಆ ದಾರಿಗೆ ಹೊಂದಿ ಒಂದು ಸಣ್ಣ ಕೋಟೆಯಿತ್ತು. ಅವ್ಹಾರ್ನನು ಕೂಡಲೆ ಹೊರಟು ವೇಗದಿಂದ ಸಂಜೆಯ ಹೊತ್ತಿಗೆ ಆ ಕೋಟೆಗೆ ಬಂದನು. ಕೋಟೆಯ ಕಾವಲುಗಾರರಿಗೆ ಎಚ್ಚರಿಕೆ ಕೊಡಬೇಕೆಂದೂ, ಫ್ರೆಂಚ ಸೈನ್ಯಕ್ಕೆ ಈ ಸುದ್ದಿಯನ್ನು ಮುಟ್ಟಿಸಲಿಕ್ಕೆ ಅವರಲ್ಲೊಬ್ಬನನ್ನು ಕಳುಹಬೇಕೆಂದೂ ಅವನು ಆಲೋಚಿಸಿದ್ದನು. ಕೋಟೆಯೊಳಗೆ ಹೋಗಿ ನೋಡುತ್ತಾನೆ—ಕಾವಲುಗಾರರು ಯಾರೂ ಇಲ್ಲ. ಎಲ್ಲರೂ ಓಡಿಹೋಗಿರುತ್ತಾರೆ! ಅವ್ಹಾರ್ನನು ಒಬ್ಬನೇ ಕೋಟೆಯನ್ನು ಸಂರಕ್ಷಿಸಬೇಕೆಂದು ನಿಶ್ಚಯ ಮಾಡಿದನು. ಆ ಕೋಟೆಯ ಕಾವಲಿಗೆ ಸಾಧಾರಣವಾಗಿ ಮೂವತ್ತು ಜನ ಸೈನಿಕರು ಇರುತ್ತಿದ್ದರು. ಅವರು ಓಡಿಹೋಗುವಾಗ ತಮ್ಮ ಬಂದೂಕುಗಳನ್ನು ಹೊತ್ತುಕೊಂಡು ಹೋಗುವ ಆಯಾಸವನ್ನು ಕೂಡ ಮಾಡಿಕೊಂಡಿರಲಿಲ್ಲ. ಅವ್ಹಾರ್ನನು ತಡಮಾಡದೆ ಕೋಟೆಯ ಬಾಗಿಲನ್ನು ಮುಚ್ಚಿ ಕಾವಲುಗಾರರು ಬಿಟ್ಟುಹೋದ ಮೂವತ್ತೂ ಬಂದೂಕುಗಳಲ್ಲಿ ಮದ್ದು ಜಡಿದು ಸಜ್ಜುಮಾಡಿ ಕೊತ್ತಳದ ಕಿಂಡಿಗಳಲ್ಲಿ ಹೂಡಿಕೊಂಡು ನಿಂತನು. ಸರಿರಾತ್ರಿಯ ಕತ್ತಲೆಯಲ್ಲಿ ಆಸ್ಟ್ರಿಯನ್ ಸೈನಿಕರು ಕೋಟೆಯ ಸಮೀಪಕ್ಕೆ ಬರುವ ಸಪ್ಪಳವು ಕೇಳಬರಹತ್ತಿತು. ಆಸ್ಟ್ರಿಯನ್ನರು, ತಿಳಿಯದಂತೆ ಒಮ್ಮಿಂದೊಮ್ಮೆ ಕೋಟೆಯನ್ನು ಮುತ್ತಬೇಕೆಂದು ಈ ವರೆಗೆ ತಡಮಾಡಿದ್ದರು. ಬಂದೂಕಿನ ಅಳವಿನಲ್ಲಿ ಬಂದೊಡನೆ ಅವ್ಹಾರ್ನನು ಒಂದೊಂದಾಗಿ ಐದಾರು ಬಂದೂಕುಗಳನ್ನು ತಡಮಾಡದೆ ಹಾರಿಸಲು ಸಾಲ್ಕೈದು ಜನ ಆಸ್ಟ್ರಿಯನ್ ಸೈನಿಕರು ಬಿದ್ದು ಮಡಿದರು. ಕಾವಲುಗಾರರು ಎಚ್ಚರಿಕೆಯಿಂದ ಇರುವರೆಂದು ತಿಳಿದು ಆಸ್ಟ್ರಿಯನ್ ಸೇನಾಪತಿಯು ರಾತ್ರಿಯಲ್ಲಿ ಮುತ್ತಿಗೆ ಹಾಕುವುದನ್ನು ನಿಲ್ಲಿಸಿದನು. ಬೆಳಗ್ಗೆ ಆಸ್ಟ್ರಿಯನ್ನರು ಒಂದು

ತೋಫನ್ನು ಎಳೆದು ತಂದು ಕೋಟೆಯನ್ನು ಒಡೆಯಲೋಸುಗ ತಕ್ಕ ಸ್ಥಳದಲ್ಲಿ ಹೂಡುವುದಕ್ಕೆ ಆರಂಭಿಸಿದರು. ಆದರೆ ಆ ಮಾರ್ಗವು ಅಂಕಡೊಂಕಾಗಿದ್ದುದ ರಿಂದ ಬಂದೂಕಿನ ಅಳವಿನೊಳಗೆ ಸಿಕ್ಕದೆ ತೋಫನ್ನು ಹೂಡುವುದಕ್ಕೆ ಬರು ವಂತೆ ಇರಲಿಲ್ಲ. ಅವರು ಅಳವಿನೊಳಗೆ ಬಂದೊಡನೆ ಅವ್ಹಾರ್ನನು ಮೊದಲೇ ತುಂಬಿಟ್ಟ ಬಂದೂಕುಗಳನ್ನು ಗುರಿಹಿಡಿದು ಅವಸರದಿಂದ ಹಾರಿಸತೊಡಗಿದನು. ಈಗಿನಂತೆ ಆಗ ಕಾಡ್‌ತೂಸುಗಳಿರಲಿಲ್ಲ. ಆದುದರಿಂದ ಕೋಟೆಯೊಳಗೆ ಕಾವಲು ಗಾರರು ಬಹಳ ಜನರಿರುವರೆಂದು ಆಸ್ಟ್ರಿಯನ್ನರು ತಿಳಿದರು. ತೋಫನ್ನು ಸರಿ ಯಾಗಿ ಹೂಡಿ ಹಾರಿಸುವುದಕ್ಕೆ ಅವ್ಹಾರ್ನನು ಅವಕಾಶವನ್ನೇ ಕೊಡಲಿಲ್ಲ. ವ್ಯರ್ಥವಾಗಿ ಹಲವು ಜನ ತೋಫಿನ ಸೈನಿಕರು ಮಡಿದುಹೋದುದನ್ನು ಕಂಡು ಆಸ್ಟ್ರಿಯನ್ ಸೇನಾಪತಿಯು ಕೋಟೆಗೆ ಲಗ್ಗೆಯೇರಿರೆಂದು ಕಾಲಾಳುಗಳಿಗೆ ಅಪ್ಪಣೆಮಾಡಿದನು. ಆದರೆ ಆ ದಾರಿಯು ಮೂವರಿಗಿಂತ ಹೆಚ್ಚು ಜನರು ಒಂದೇ ಸಾಲಿನಲ್ಲಿ ಓಡುವಷ್ಟು ಇಂಬಾಗಿರಲಿಲ್ಲವಾದುದರಿಂದ ಹಲವು ಬಾರಿ ಮಾಡಿದ ಪ್ರಯತ್ನವು ವ್ಯರ್ಥವಾಯಿತು. ಬಹು ಜನ ಆಸ್ಟ್ರಿಯನ್ ಸೈನಿಕರು ಗಾಯ ಹೊಂದಿದರು. ಈ ಹೊತ್ತಿಗೆ ಅವ್ಹಾರ್ನಸಿಗೆ ಮದ್ದುಗುಂಡುಗಳ ಕೊರತೆ ಯಾಯಿತು. ಅವ್ಹಾರ್ನನು—ಓಡಿಹೋದ ಕೋಟೆಯ ಕಾವಲುಗಾರರಿಂದ ಸುದ್ದಿ ಮುಟ್ಟಿ ಇಷ್ಟು ಹೊತ್ತಿಗೆ ಫ್ರೆಂಚಸೈನ್ಯವು ಇತ್ತಕಡೆಗೆ ಹೊರಟಿರಬಹು ದೆಂದೂ, ಈಗ ಕೋಟೆಯು ಆಸ್ಟ್ರಿಯನ್ನರ ಕೈಸೇರಿದರೂ ಫ್ರೆಂಚರಿಗೆ ಹಾನಿ ಯಾಗಲಾರದೆಂದೂ ತಿಳಿದನು. ಸಾಯಂಕಾಲದ ಹೊತ್ತಿಗೆ ಆಸ್ಟ್ರಿಯದ ಸೇನಾ ಪತಿಯು ಕೋಟೆಯನ್ನು ಒಪ್ಪಿಸಬೇಕೆಂದು ಹೇಳಿ ಕಳುಹಲು ಅವ್ಹಾರ್ನನು— ಕೋಟೆಯ ಸಶಸ್ತ್ರರಾದ ಕಾವಲುಗಾರರು ತಮ್ಮ ಫ್ರೆಂಚ ನಿಶಾನೆಯೊಡನೆ ಫ್ರೆಂಚ ಸೈನ್ಯಕ್ಕೆ ಹೋಗಿ ಕೂಡುವುದಕ್ಕೆ ನೀವು ಅಡ್ಡಿಮಾಡುವುದಿಲ್ಲವೆಂದು ನಂಬಿಗೆಕೊಟ್ಟರೆ ನಾಳೆ ಬೆಳಗ್ಗೆ ಕೋಟೆಯನ್ನು ಸ್ವಾಧೀನಪಡಿಸುವೆನೆಂದು ಒಪ್ಪಿ ಕೊಂಡನು. ಆಗಲೇ ಶತ್ರುಗಳು ಆಕ್ರಮಣಮಾಡಿದ್ದರೆ ಮದ್ದು ತೀರಿ ಹೋದು ದರಿಂದ ಅರ್ಧ ತಾಸಿನೊಳಗೆ ಕೋಟೆಯು ಅವರ ವಶವಾಗುತ್ತಿತ್ತು. ಮರುದಿನ ಬೆಳಗ್ಗೆ ಒಪ್ಪಂದದ ಮೇರೆಗೆ ಆಸ್ಟ್ರಿಯದ ಸೈನಿಕರು ಕೋಟೆಯ ಬಾಗಿಲಲ್ಲಿ ಉದ್ದಕ್ಕೆ ಎರಡು ಸಾಲಾಗಿ ನಿಂತುಕೊಂಡರು. ನಡುವೆ ಒಬ್ಬರು ಹೋಗುವಷ್ಟು ದಾರಿಯನ್ನು ಬಿಟ್ಟಿದ್ದರು. ತುತೂರಿಯ ಶಬ್ದದೊಡನೆ ಕೋಟೆಯ ದಿಡ್ಡಿಯ ಬಾಗಿಲು ತೆರೆಯಲು ಒಳಗಿಂದ ಒಬ್ಬನೇ ಒಬ್ಬ ಮನುಷ್ಯನು ಹಲವು ಬಂದೂ

ಕುಗಳನ್ನು ಹೊರೆ ಕಟ್ಟಿ ಹೊತ್ತುಕೊಂಡು ಅವುಗಳ ಭಾರದಿಂದ ಬಗ್ಗಿದವನಾಗಿ ಕೈಯಲ್ಲಿ ನಿಶಾನೆ ಹಿಡಿದುಕೊಂಡು ಬರುತ್ತಿರುವುದು ಕಂಡುಬಂತು. ಆಸ್ಟ್ರಿಯದ ಸೇನಾಪತಿಯು ಉಳಿದವರೆಲ್ಲ ಏಕೆ ಬರಲೊಲ್ಲರು ಎಂದು ಕೇಳಿದನು. ಆಗ ಅವ್ಹಾರ್ನನು—ಕೋಟೆಯ ಕಿಲ್ಲೇದಾರನೆಂದರೂ ನಾನೇ; ಕೋಟೆಯ ಕಾವಲಿನ ಸೇನೆಯೆಂದರೂ ನಾನೇ ಎಂದು ಹೇಳಿದನು. ಆಗ ಆಸ್ಟ್ರಿಯದ ಸೇನಾಪತಿಗೆ ಆದ ಆಶ್ಚರ್ಯವನ್ನು ಹೇಳಲಾಸಲ್ಲ. ಒಬ್ಬನೇ ಒಬ್ಬನು ಒಂದು ಸೈನ್ಯದ ತುಕಡಿಯ ವಿರುದ್ಧವಾಗಿ ಎರಡು ರಾತ್ರಿ, ಮತ್ತು ಒಂದು ಹಗಲು ಹೋರಾಡಿ ಹಲವು ಜನರನ್ನು ಕೊಂದು ಹಲವರಿಗೆ ಗಾಯಮಾಡಿ ಕೋಟೆಯನ್ನು ಕಾದುಕೊಂಡಿರುವುದನ್ನು ನೋಡಿ ಉದಾರ ಹೃದಯನಾದ ಆಸ್ಟ್ರಿಯದ ಸೇನಾಪತಿಯು ಮೆಚ್ಚಿ ಅವ್ಹಾರ್ನನಿಗೆ ಒಂದು ಪ್ರಶಂಸಾಪತ್ರವನ್ನು ಬರೆದು ಕೊಟ್ಟನು. ಮತ್ತು ತನ್ನ ಸೈನಿಕರನ್ನು ಕುರಿತು—ಯಾವ ದೇಶದಲ್ಲಿ ಜನರೊಳಗೆ ತಮ್ಮ ದೇಶದ ಗೌರವ ಕಾದುಕೊಳ್ಳುವುದಕ್ಕಾಗಿ ಇಂತಹ ಅದ್ಭುತ ಕಾರ್ಯವನ್ನು ಮಾಡುವ ಮನಸ್ಸು ಹುಟ್ಟುವುದೋ ಆ ದೇಶವು ಧನ್ಯವು; ನೀವೂ ಹೀಗೆಯೇ ಆಗಿರಿ ಎಂದು ನುಡಿದನು. ಬಳಿಕ ಎಲ್ಲ ಬಂದೂಕುಗಳನ್ನು ತನ್ನ ಆಳುಗಳಿಂದ ಹೊರಿಸಿ ಅವ್ಹಾರ್ನನನ್ನು ಫ್ರೆಂಚ ಸೈನ್ಯವಿರುವಲ್ಲಿಗೆ ಕಳುಹಿಕೊಟ್ಟನು.

ಚಕ್ರವರ್ತಿಯಾದ ನೆಪೋಲಿಯನ್ ಬೋನಾಪಾರ್ಟನು ಈ ಸುದ್ದಿಯನ್ನು ಕೇಳಿ ಹೆಚ್ಚಿನ ಪದವಿಯನ್ನು ಅಪೇಕ್ಷಿಸದ ಅವ್ಹಾರ್ನನಿಗೆ—"ಫ್ರಾನ್ಸದ ಸರ್ವಶ್ರೇಷ್ಠ ಗ್ರೇನೇಡಿಯರ್" ಎಂಬ ಬಿರುದನ್ನು ಕೊಟ್ಟನು. ಮತ್ತು ಮುಂದೆ ೧೮೦೦ ರಲ್ಲಿ ಅವ್ಹಾರ್ನನು ರಣಾಂಗಣದಲ್ಲಿ ಮಡಿಯಲು ಗ್ರೇನೇಡಿಯರ್ ರೆಜಿಮೆಂಟಿನ ರಜಿಸ್ಟರಿನಲ್ಲಿ ಆತನ ಹೆಸರನ್ನು ತೆಗೆದು ಹಾಕಕೂಡದೆಂದು ಅಪ್ಪಣೆ ಮಾಡಿದನು. ಪ್ರತಿದಿವಸ ಸಾಯಂಕಾಲ ಈ ರೆಜಿಮೆಂಟಿನ ಸೈನಿಕರ ಹಾಜರಿಯನ್ನು ಹಾಕುವಾಗ ಎಲ್ಲಕ್ಕೂ ಮೊದಲಿಗೆ ತಪ್ಪದೆ ಅವ್ಹಾರ್ನನ ಹೆಸರು ಹಿಡಿದು ಕೂಗುವರು. ಒಬ್ಬ ಗ್ರೇನೇಡಿಯರ್ ಸೈನಿಕನು—"ಆತನು ರಣಾಂಗಣದಲ್ಲಿ ಅತುಲವಾದ ಕೀರ್ತಿಶಯ್ಯೆಯ ಮೇಲೆ ಮಲಗಿರುವನು." ಎಂದು ತಪ್ಪದೆ ಗಟ್ಟಿಯಾಗಿ ಕೂಗಿ ಹೇಳುವನು. ಈ ಮೇರೆಗೆ ನೆಪೋಲಿಯನನು ಅವ್ಹಾರ್ನನ ಹೆಸರನ್ನು ಮರೆಯದಂತೆ ಮಾಡಿದುದಲ್ಲದೆ ತನ್ನ ಗ್ರೇನೇಡಿಯರ್ ಸೈನ್ಯವು ಹುರುಪುಳ್ಳುದಾಗುವಂತೆಯೂ ಮಾಡಿದನು.

---

ಕೊಟ್ಟ ವಚನವನ್ನು ನಡೆಸುವುದು.

## ೭ ಸರ್ ವಿಲಿಯಂ ನೇಪಿಯರ್.

ಇತಿಹಾಸಲೇಖಕನಾದ ಸರ್ ವಿಲಿಯಂ ನೇಪಿಯರನು ಒಂದು ದಿವಸ ಊರ ಹೊರಗೆ ತಿರುಗಾಡುವುದಕ್ಕೆ ಹೊರಟಿದ್ದನು. ಅಲ್ಲಿ ಒಬ್ಬ ಹುಡಿಗೆಯು ದಾರಿಯು ಬದಿಗೆ ಅಳುತ್ತ ಕುಳಿತಿದ್ದಳು. ವಿಲಿಯಮನು ಏಕೆ ಅಳುವೆಯೆಂದು ಕೇಳಲು ಆ ಹುಡಿಗೆ—ನೀರು ತುಂಬಿದ ಮಣ್ಣಿನ ಕೊಡವು ಕೆಳಗೆ ಬಿದ್ದು ಒಡೆದು ಹೋಯಿತು; ನಾವು ಬಡವರು; ಬರಿಗೈಯಿಂದ ಹೋಗಲು ಮನೆಯಲ್ಲಿ ತಾಯಿ ನನ್ನನ್ನು ಹೊಡೆಯುವಳು. ಎಂದು ಹೇಳಿ ಮತ್ತೆ—ದಯಮಾಡಿ ಈ ಕೊಡವನ್ನು ಮೊದಲಿದ್ದಂತೆ ಮಾಡಿಕೊಡುವಿರಾ ಎಂದು ಕೇಳಿ ಬಿಕ್ಕಿಬಿಕ್ಕಿ ಅಳತೊಡಗಿದಳು. ಆಗ ನೇಪಿಯರನು—ತಂಗೀ, ಒಡೆದುದನ್ನು ಮೊದಲಿನಂತೆ ಮಾಡಿಕೊಡಲಿಕ್ಕೆ ನನಗೆ ಬಾರದು; ಆದರೆ ಹೊಸದನ್ನು ಕೊಳ್ಳುವುದಕ್ಕೆ ಬೆಲೆಯನ್ನು ಮಾತ್ರ ನಾನು ಕೊಡಬಲ್ಲೆನು; ಅಳಬೇಡ ಎಂದು ಹೇಳಿ ಕಿಸೆಯೊಳಗಿನ ಪಾಕೆಟನ್ನು ತೆರೆದು ನೋಡಲು ಅದರಲ್ಲಿ ಏನೂ ಹಣವಿರಲಿಲ್ಲ. ಆಗ ಆತನು ತಂಗೀ, ನಾಳೆ ಇದೇ ಹೊತ್ತಿಗೆ ಇದೇ ಸ್ಥಳಕ್ಕೆ ತಪ್ಪದೆ ಬಾ; ನಿನಗೆ ಹಣವನ್ನು ಕೊಡುವೆನು, ಈ ಮಾತನ್ನು ನಿನ್ನ ತಾಯಿಗೆ ಹೇಳು, ಆಕೆ ನಿನ್ನನ್ನು ಹೊಡೆಯಲಾರಳು ಎಂದು ಆ ಹುಡಿಗೆಗೆ ಸಮಾಧಾನ ಹೇಳಿ ಮನೆಗೆ ಬಂದನು. ನೆರೆಯೂರಿನಿಂದ ಪ್ರವಾಸಕ್ಕೆ ಹೊರಟ ಸ್ನೇಹಿತನೊಬ್ಬನು ಸ್ಟೇಶನಿನಲ್ಲಿ ಮರುದಿನ ಅದೇ ಹೊತ್ತಿಗೆ ತನ್ನನ್ನು ತಪ್ಪದೆ ಕಾಣಬೇಕೆಂದು ಬರೆದ ಪತ್ರವನ್ನು ನೇಪಿಯರನು ಮನೆಗೆ ಬಂದೊಡನೆ ನೋಡಿದನು. ಒಂದೇ ಹೊತ್ತಿಗೆ ಒಬ್ಬನೇ ಎರಡು ಕಡೆಗೆ ಹೋಗುವುದು ಹೇಗೆ? ಆ ಹುಡಿಗೆಗೆ ಹಣಕೊಡುವುದಕ್ಕೆ ವಿಲಿಯಂ ನೇಪಿಯರನು ತಾನೇ ಹೋದನು. ಸ್ನೇಹಿತನ ಕಡೆಗೆ ಪತ್ರವನ್ನು ಕೊಟ್ಟು ತನ್ನ ಒಬ್ಬ ಮನುಷ್ಯನನ್ನು ಕಳುಹಿದನು.

ಈ ಸಂದರ್ಭದಲ್ಲಿ ಹಲವರು ಆ ಹುಡಿಗೆಯ ಕಡೆಗೇ ಮನುಷ್ಯನನ್ನು ಕಳುಹುತ್ತಿದ್ದರು. ಆದರೆ ಹಾಗೆ ಮಾಡಿದರೆ ಒಂದು ವೇಳೆ ಅದೇ ಹುಡಿಗೆಯ ಮತ್ತು ಅದೇ ಸ್ಥಳದ ಗೊತ್ತು ಸಿಕ್ಕದೆ ಇರಬಹುದು. ಹಾಗಾದರೆ ಕೊಟ್ಟ ವಚನವನ್ನು ಹೇಗೆ ನಡೆಸಿದಂತಾದೀತು? ಎಂದು ವಿಲಿಯಂ ನೇಪಿಯರನು ವಿಚಾರ ಮಾಡಿದನು.

---

ಸೇವಕನಲ್ಲಿ ಪ್ರೀತಿ. **೮ ಫ್ರೆಡರಿಕ್ ದಿ ಗ್ರೇಟ್; ಮತ್ತು ಪ್ರತೀಹಾರಿ.**

ಪ್ರಶಿಯದ ಪ್ರಸಿದ್ಧ ರಾಜನಾದ **ಫ್ರೆಡರಿಕ್ ದಿ ಗ್ರೇಟ್** ಎಂಬವನು ಒಮ್ಮೆ ತನ್ನ ಕೋಣೆಯಲ್ಲಿ ಕುಳಿತಿರುವಾಗ ಏನೋ ಬೇಕಾಗಲು ಅವನು ಬಾಗಿಲಲ್ಲಿದ್ದ ಆಳನ್ನು ಕರೆಯುವ ‡ಗಂಟೆಯನ್ನು ಬಾರಿಸಿದನು. ಆಳು ಬಾರದಿರಲು ಫ್ರೆಡರಿಕನು ತಾನೇ ಹೊರಗೆ ಬಂದು ನೋಡಿದನು. ಆಳು ಕುಳಿತಲ್ಲಿಯೇ ನಿದ್ದೆ ಮಾಡುತ್ತಿದ್ದನು. ಅರಸನು ಆತನನ್ನು ಎಚ್ಚರಿಸಲೋಸುಗ ಹತ್ತಿರಬಂದು ಆತನ ಕಿಸೆ (ಜೇಬು) ಯೊಳಗಿನ ಪತ್ರವೊಂದನ್ನು ಕಂಡು ಮೆಲ್ಲನೆ ಅದನ್ನು ಕೈಯಿಂದ ತೆಗೆದುಕೊಂಡು ಓದಿದನು. ಆ ಪತ್ರವು ಆ ಆಳಿನ ತಾಯಿ ಮಗನಿಗೆ ಬರೆದುದು. ಅದರಲ್ಲಿ ಆಕೆಯು ಮಗನನ್ನು ಕುರಿತು—ನೀನು ನಿನ್ನ ಸಣ್ಣ ಸಂಬಳದಲ್ಲಿ ಕೆಲವು ಭಾಗವನ್ನು ಳಿಸಿ ಮುದುಕೆಯಾದ ನನಗೆ ಕಳುಹುತ್ತಿರುವುದು ಬಹಳ ಪುಣ್ಯದ ಕೆಲಸವು. ಇದಕ್ಕಾಗಿ ದೇವರು ನಿನ್ನ ಕಲ್ಯಾಣವನ್ನು ಮಾಡುವನು ಎಂದು ಬರೆದಿದ್ದಳು. ಪತ್ರವನ್ನು ಓದಿಕೊಂಡ ಬಳಿಕ ಅರಸನು ಮೆಲ್ಲನೆ ಮರಳಿ ಕೋಣೆಯೊಳಗೆ ಹೋಗಿ ಡ್ಯೂಕ್ಟ್ (೨॥ ರು. ಬೆಲೆ) ಎಂಬ ನಾಣ್ಯಗಳನ್ನು ಮುಷ್ಟಿತುಂಬ ತಂದು ಆ ಪತ್ರವಿದ್ದ ಕಿಸೆಯಲ್ಲಿ ಅವನ್ನು ಮೆಲ್ಲನೆ ಹಾಕಿದನು. ಬಳಿಕ ಕೋಣೆಯೊಳಗೆ ಹೋಗಿ ಮತ್ತೆ ಗಂಟೆಯನ್ನು ಗಟ್ಟಿಯಾಗಿ ಬಾರಿಸಿದನು. ಸಿಪಾಯಿಯು ಎಚ್ಚತ್ತು ಒಳಗೆ ಬರುತ್ತ ಜಡವಾಗಿದ್ದ ಕಿಸೆಯಲ್ಲಿ ಕೈಹಾಕಿ ಅದರಲ್ಲಿದ್ದ ನಾಣ್ಯಗಳನ್ನು ನೋಡಿ ಯಾರೋ ತನ್ನ ಮೇಲೆ ಕಳವನ್ನು ಹೊರಿಸಬೇಕೆಂದು ಹಾಗೆ ಮಾಡಿರುವರೆಂದು ಅಂಜಿ ಬೆಪ್ಪಾಗಿ ಅರಸನೆದುರಿಗೆ ನಿಂತನು. ಅರಸನು ಹೀಗೇಕೆಂದು ಕೇಳಲು ಆತನು ತನ್ನ ಎಚ್ಚರಗೇಡಿತನಕ್ಕೂ, ಬಂದ ಆಪತ್ತಿಗೂ ಅಂಜಿ ಅಳಹತ್ತಿದನು. ಆಗ ಅರಸನು—ದೇವರು ನಿದ್ರೆಯಲ್ಲಿ ನಿನಗೆ ಕಲ್ಯಾಣಮಾಡಿರಬಹುದು, ಅಂಜಲು ಕಾರಣವಿಲ್ಲ; ದೇವರು ಒಮ್ಮೊಮ್ಮೆ ಹೀಗೆ ಮಾಡುತ್ತಿರುವನು ಎಂದು ಸಮಾಧಾನಗೊಳಿಸಿ—ಈ ಹಣವನ್ನು ನಿನ್ನ ತಾಯಿಗೆ ಕಳುಹು, ಮತ್ತು ನಿಮ್ಮಿಬ್ಬರ ಸಂರಕ್ಷಣವನ್ನು ಇನ್ನು ಮುಂದೆ ಅರಸನು ಮಾಡುವನೆಂದು ನಿನ್ನ ತಾಯಿಗೆ ತಿಳಿಸು ಎಂದು ಹೇಳಿದನು. ಈ ಮಾತನ್ನು ಕೇಳುತ್ತಿರುವಾಗ ಸಿಪಾಯಿಗೆ ಮೈಮೇಲೆ ಅಮೃತದ ಮಳೆ ಸುರಿದಂತಾಯಿತು.

---

‡ ಯುರೋಪಿಯನ್ನರಲ್ಲಿ ಆಳನ್ನು ಕರೆಯುವುದಕ್ಕೆ ಗಂಟೆಯನ್ನು ಬಾರಿಸುವ ಪದ್ಧತಿಯುಂಟೆಂಬುದನ್ನು ಹಲವರು ಬಲ್ಲರು.

ದೊಡ್ಡ ಮನಸ್ಸು.

## ೯ ಮೊದಲನೆಯ ಬಾಜಿರಾಯ.

ದೊಡ್ಡ (ಮೊದಲನೆಯ) ಬಾಜಿರಾಯನಿಗೂ ನಿಜಾಮುಲ್ಮುಲ್ಕನಿಗೂ ೧೭೨೮ ರಲ್ಲಿ ಗೋದಾವರಿಯ ದಂಡೆಯ ಮೇಲೆ ಯುದ್ಧವಾಯಿತು ಅದರಲ್ಲಿ ಮರಾಠರು ಗೆದ್ದರು. ಮುಸಲ್ಮಾನರ ದಂಡು ಅಸ್ತವ್ಯಸ್ತವಾಯಿತು; ಧಾನ್ಯದ ಕೊರತೆಯಾದುದರಿಂದ ಅವರು ಬಹಳ ತೊಂದರೆಗೊಳಗಾದರು. ಈ ಸಮಯದಲ್ಲಿಯೇ ಮುಸಲ್ಮಾನರ ಹಬ್ಬವೊಂದು ಬಂದಿತು. ಆಗ ನಿಜಾಮನು ನಿರುಪಾಯನಾಗಿ-ತನ್ನ ಸೇನೆಗೆ ಅನ್ನದ ಕೊರತೆಯಾಗಿರುವುದರಿಂದ ಕಾಳುಕಡಿಗಳನ್ನು ಕಳುಹಿಕೊಡಬೇಕೆಂದು ವಿಜ್ಞಾಪಿಸಿಕೊಳ್ಳುವುದಕ್ಕೆ ತನ್ನ ವಕೀಲನೊಬ್ಬನನ್ನು ಬಾಜಿರಾಯನ ಕಡೆಗೆ ಕಳುಹಿದನು.

ಬಾಜಿರಾಯನು ತನ್ನ ಮಂತ್ರಿಗಳನ್ನು ಕುರಿತು—ಈ ವಿಷಯದಲ್ಲಿ ನಿಮ್ಮ ಸಲಹೆಯೇನೆಂದು ಕೇಳಿದನು. ಕೆಲವರು—ಈಗ ನಿಜಾಮನು ಹಣ್ಣಾಗಿರುವುದರಿಂದ ಆತನ ಪಾರುಪತ್ಯಮಾಡುವುದಕ್ಕೆ ಈ ಸಮಯವು ಯೋಗ್ಯವಾಗಿರುವುದರಿಂದ ಅವನಿಗೆ ಈಗ ಯಾವ ಸಹಾಯವನ್ನೂ ಮಾಡಬಾರದು ಎಂದು ಹೇಳಿದರು. ಈ ಮಾತನ್ನು ಬಾಜಿರಾಯನು ಒಪ್ಪಲಿಲ್ಲ. ಹಾಗೆ ಹೇಳಿದವರನ್ನು ಕುರಿತು—ವೈರಿಯು ಬೇನೆ ಹಸಿವೆಗಳಿಂದ ಬಳಲುವಾಗ ಇಲ್ಲವೆ ಮಲಗಿರುವಾಗ ಅವನನ್ನು ಸಂಹರಿಸುವುದು ಧರ್ಮವೇ? ಎಂದು ಕೇಳಿದನು. ಬಳಿಕ ಆತನು ಐದು ಸಾವಿರ ಎತ್ತುಗಳ ಮೇಲೆ ಕಾಳು ಕಡಿ ಮೊದಲಾದ ಆಹಾರ ಪದಾರ್ಥಗಳನ್ನು ಹೇರಿ ನಿಜಾಮನ ಪಾಳಯಕ್ಕೆ ಕಳುಹಿದನು. ನಿಜಾಮನಿಗೆ ಬಹಳ ಸಂತೋಷವಾಯಿತು. ಇದರಿಂದ ಅವರಿಬ್ಬರ ನಡುವೆ ಕೂಡಲೆ ಒಪ್ಪಂದವಾಯಿತು.

ಎಂತಹ ಗೊಂದಲದಲ್ಲಿದ್ದರೂ ಯಾವನು ತನ್ನ ಮನುಷ್ಯತ್ವವನ್ನು ಕಾದುಕೊಳ್ಳುವನೋ ಅವನೇ ದೊಡ್ಡವನು.

---

ಈಪೊತ್ತಿನ ಕೆಲಸವನ್ನು ನಾಳೆಗೆ ಇಡಬೇಡ.

## ೧೦ ಬರ್ನಾರ್ಡ ಮತ್ತು ಫೊಯ್.

'ರೇನೀಸ್' ಪಟ್ಟಣವು ಕಾಯದೆಗಳ ಜ್ಞಾನ, ಹಾಗು ವಕೀಲರು ಈ ವಿಷಯವಾಗಿ ಫ್ರಾನ್ಸದೇಶದಲ್ಲಿ ಬಹಳ ಪ್ರಸಿದ್ಧವಾದುದು. ನೆರೆಯೂರುಗಳ ಒಕ್ಕಲಿಗರು ಮೊದಲಾದವರು ಆ ಪಟ್ಟಣಕ್ಕೆ ಹೋದಾಗ ಅಲ್ಲಿಯ ವಕೀಲರ ಸಲಹೆ

ಯನ್ನು ಕೇಳಿಕೊಂಡಲ್ಲದೆ ಹಾಗೆಯೇ ಬಾರರು. ಈ ಪದ್ಧತಿಯು ಬಹುಕಾಲದಿಂದ ನಡೆದು ಬಂದಿದೆ.

ಒಂಪಾನೊಂದು ದಿವಸ ನೆರೆಹಳ್ಳಿಯ ಬರ್ನಾರ್ಡ ಎಂಬ ಶುದ್ಧ ಸಾತ್ವಿಕನಾದ ಒಬ್ಬ ಒಕ್ಕಲಿಗನು ಒಂದು ಕೆಲಸಕ್ಕೆ ರೇನೀಸ್ ಪಟ್ಟಣಕ್ಕೆ ಹೋಗಿದ್ದನು. ತನ್ನ ಕೆಲಸವನ್ನು ತೀರಿಸಿಕೊಂಡು ಆತನು ಬೇರೆ ಜನರಂತೆ ತಾನೂ ವಕೀಲರ ಸಲಹೆಯನ್ನು ಕೇಳಿಕೊಂಡು ಹೋಗಬೇಕೆಂದು ಮಾಡಿದನು. ಆತನು ಫಾಯ್ ಎಂಬ ಪ್ರಸಿದ್ಧ ವಕೀಲನ ಹೆಸರನ್ನು ಹಲವು ಸಾರೆ ಕೇಳಿದುದರಿಂದ ಆತನ ಮನೆಯನ್ನು ಹುಡುಕಿಕೊಂಡು ಹೋದನು. ಯಾವ ವಿಷಯದಲ್ಲಿ ವಕೀಲರ ಸಲಹೆಯನ್ನು ಕೇಳಬೇಕೆಂಬುದನ್ನು ಬರ್ನಾರ್ಡನು ಗೊತ್ತುಮಾಡಿಕೊಂಡಿರಲಿಲ್ಲ; ಅಥವಾ ಬರ್ನಾರ್ಡನಿಗೆ ವಕೀಲರ ಸಲಹೆಯು ಬೇಕಾದ ಯಾವ ವಿಷಯವೂ ಇರಲಿಲ್ಲ. ಆಗ ಅವರಲ್ಲಿ ಇಂತು ಸಂಭಾಷಣೆ ನಡೆಯಿತು:—

ಫಾಯ್—(ಬರ್ನಾರ್ಡನನ್ನು ಕುರಿತು) ಯಾರಮೇಲಾದರೂ ಫಿರ್ಯಾದಿ ಮಾಡಬೇಕಾಗಿದೆಯೇ?

ಬರ್ನಾರ್ಡ—ನಾನು ಯಾರ ಸಂಗಡಲೂ ಜಗಳವು ಬಾರದಂತೆಯೇ ನಡೆಯುವೆನು.

ಫಾಯ್—ಆಸ್ತಿಯ ವಿಭಾಗ ಮಾಡಿಕೊಳ್ಳುವ ವಿಷಯದಲ್ಲಿ ವಿವಾದವುಂಟಾಗಿದೆಯೇ?

ಬರ್ನಾರ್ಡ—ರಟ್ಟೆಯ ಮುರಿದು ಹೊಟ್ಟೆ ಹೊರೆದುಕೊಳ್ಳುವ ನಾನು ಆಸ್ತಿಯನ್ನು ದೊಡ್ಡದಾಗಿ ತಿಳಿದಿಲ್ಲ.

ಫಾಯ್—ಕೊಳ್ಳುವ ಇಲ್ಲವೆ ಮಾರುವ ವ್ಯವಹಾರದಲ್ಲಿ ಆಲೋಚನೆ ಬೇಕಾಗಿದೆಯೇ?

ಬರ್ನಾರ್ಡ—ಪರರ ಆಸ್ತಿಯನ್ನಾಗಲಿ, ವಿಲಾಸದ ವಸ್ತುಗಳನ್ನಾಗಲಿ ಕೊಳ್ಳುವಷ್ಟು ಹಣಗಾರನೂ ನಾನಲ್ಲ; ಉಪಜೀವನಕ್ಕಾಗಿ ಮನೆಯದನ್ನು ಮಾರುವಷ್ಟು ದೀನನೂ ನಾನಲ್ಲ.

ಫಾಯ್—ಹೀಗಿದ್ದರೆ ವಕೀಲರ ಕಡೆಗೆ ಬಂದುದೇಕೆ?

ಬರ್ನಾರ್ಡ—ತಮ್ಮ ಪ್ರಸಿದ್ಧಿಯನ್ನು ಕೇಳಿ ಜಾಣರಾದ ತಮ್ಮ ಬಳಿಯಲ್ಲಿ ಏನಾದರೂ ಸಲಹೆಯನ್ನು ಕೇಳಿಕೊಂಡು ಹೋಗಬೇಕೆಂದು ಬಂದಿರುವೆನು.

ನಿಪುಣನಾದ ವಕೀಲನು ಬರ್ನಾರ್ಡನ ಸ್ಥಿತಿಯನ್ನು ಕಂಡು ಇವನೊಡನೆ ವೇಳೆ ಕಳೆಯುವುದರಲ್ಲಿ ಪ್ರಯೋಜನವಿಲ್ಲವೆಂದರಿತು ಒಂದು ಕಾಗದವನ್ನು ತೆಗೆದುಕೊಂಡು ಸ್ವಲ್ಪ ಬರೆದಂತೆ ಮಾಡಿ ಮಡಿಚಿ 'ಇದು ನನ್ನ ಸಲಹೆ' ಎಂದು ಹೇಳಿ ಬರ್ನಾರ್ಡನ ಕೈಯಲ್ಲಿ ಕೊಟ್ಟನು. ಬರ್ನಾರ್ಡನು ವಕೀಲರ 'ಫೀ' ಯನ್ನು ಕೊಟ್ಟು ಆ ಕಾಗದವನ್ನು ತೆಗೆದುಕೊಂಡು ಊರಿಗೆ ಬಂದನು.

ಸಂಜೆಯ ಮುಂದೆ ಬರ್ನಾರ್ಡನ ಆಳುಗಳು ಬಂದು–ಹೊಲದಲ್ಲಿ ಕೊಯ್ದು ಹಾಕಿದ ಹುಲ್ಲಿನ ಬಣವೆಯನ್ನು ಈಗ ಒಟ್ಟಬಹುದೇ, ಮಳೆ ಬಂದರೆ ಹಾಳಾದೀತು ಎಂದು ಕೇಳಬಂದರು. ಬರ್ನಾರ್ಡನು ದಣಿದು ಬಂದುದರಿಂದ ಅನುಮಾನಿಸತೊಡಗಿದನು. ಬರ್ನಾರ್ಡನ ಹೆಂಡತಿಯು ಈಗ ಮೂರುಸಂಜೆಯಾಗುತ್ತ ಬಂದುದರಿಂದ ಕೆಲಸವು ಅರ್ಧವಾದೀತು, ನಾಳೆ ಒಟ್ಟುವ ಎಂದಳು. ಹೀಗೆ ಇತಿಮಿತಿ ನಡೆದಿರಲು ಬರ್ನಾರ್ಡನಿಗೆ ೨ ರುಬಲ್‌ಗಳನ್ನು ಕೊಟ್ಟು ತಂದ ಫಾಯ್ ವಕೀಲನ ಸಲಹೆಯು ನೆನಪಾಯಿತು. ಆತನು ತನ್ನ ಕಿಸೆಯೊಳಗಿನ ಕಾಗದವನ್ನು ತೆಗೆದು ಕೊಟ್ಟು ಹೆಂಡತಿಗೆ ಅದನ್ನು ಓದ ಹೇಳಿದನು. ಅದರಲ್ಲಿ ಒಂದೇ ಒಂದು ವಾಕ್ಯವು "ಈ ಹೊತ್ತಿನ ಕೆಲಸವನ್ನು ನಾಳೆಗೆ ಇಡಬೇಡ" ಎಂದು ಇತ್ತು.

ವಕೀಲರ ಸಲಹೆಗೆ ಮಾನಕೊಟ್ಟು ಬರ್ನಾರ್ಡನೂ, ಆತನನ್ನು ಹಿಂಬಾಲಿಸಿ ಆತನ ಹೆಂಡತಿಯೂ ಆಳುಗಳೊಡನೆ ಹೊಲಕ್ಕೆ ಹೋಗಿ ರಾತ್ರಿಯಾಗುವುದರೊಳಗೆ ಬಣವೆಯನ್ನು ಮುಗಿಸಿದರು. ಆ ದಿವಸ ರಾತ್ರಿ ಮೋಡವೇರಿ ಬರಲು ದೊಡ್ಡ ಮಳೆ ಸುರಿಯಿತು. ಎರಡನೆಯವರ ಹೊಲಗಳೊಳಗಿನ ಹುಲ್ಲು ತೇಲಿ ಹೋಯಿತು. ಬರ್ನಾರ್ಡನಿಗೆ ಸ್ವಲ್ಪವೂ ಹಾನಿ ತಟ್ಟಲಿಲ್ಲ. ವಕೀಲರ ಸಲಹೆಯನ್ನು ಬರ್ನಾರ್ಡನು ಮುಂದೆಯೂ ಬಹಳವಾಗಿ ಮನ್ನಿಸುತ್ತ ಬಂದನು. ಅದರಿಂದ ಸ್ಥಿತಿವಂತನಾಗಿ ಬರ್ನಾರ್ಡನು ಪ್ರತಿವರ್ಷ ರೇನೀಸಕ್ಕೆ ಹೋಗಿ ಫಾಯ್‌ಸಾಹೇಬನನ್ನು ಕಂಡು ಆತನಿಗೆ ಏನಾದರೂ ಕಾಣಿಕೆಯನ್ನು ಕೊಟ್ಟು ಬರುತ್ತಿದ್ದನು.

---

ಪರಾರ್ಥಜೀವನ.

## ೩೦ ಹಾತೆಮುತಾಇ.

ಪೂರ್ವಕಾಲದಲ್ಲಿ ಪರ್ಸಿಯಾ ದೇಶದಲ್ಲಿ ಹಾತೆಮುತಾಇ ಎಂಬ ಒಬ್ಬ ಅರಸನು ಆಗಿಹೋದನು. ಸರ್ವ ಪ್ರಾಣಿಗಳ ಕಲ್ಯಾಣವನ್ನು ಕೋರುವುದೇ ಆತನ ಜೀವನವ್ರತವು. ಅರಬದೇಶದ ರಾಜನು ಒಮ್ಮೆ ಪರ್ಸಿಯಾದೇಶದ ಮೇಲೆ ದಾಳಿಯಿಟ್ಟನು. ಹಾತೆಮುತಾಇಯು ಆತನೊಡನೆ ಯುದ್ಧವನ್ನು ಹೂಡಿದರೆ ಉಭಯಪಕ್ಷಗಳಲ್ಲಿಯೂ ಪ್ರಾಣಹಾನಿಯಾಗುವುದೆಂದು ಬಗೆದು ತಾನೇ ರಾಜಧಾನಿಯನ್ನು ಬಿಟ್ಟು ಅಡವಿಗೆ ಹೋಗಿಬಿಟ್ಟನು. ಅರಬರಾಜನು ನಿಶ್ಚಿಂತನಾಗಿರಬೇಕೆಂದು ಬಯಸಿ ಹಾತೆಮುನನ್ನು ಹಿಡಿದುಕೊಟ್ಟವರಿಗೆ ದೊಡ್ಡ ಪಾರಿತೋಷಿಕವನ್ನು ಕೊಡುವೆನೆಂದು ರಾಜ್ಯದಲ್ಲೆಲ್ಲ ಸಾರಿದನು. ಹಾತೆಮುತಾಇಯು ಅವಿತುಕೊಂಡಿದ್ದ ಅಡವಿಗೆ ಒಬ್ಬ ಮುದುಕನು ಹೆಂಡತಿಯೊಡನೆ ಕಟ್ಟಿಗೆ ಆರಿಸುವುದಕ್ಕೆ ಹೋಗುತ್ತಿದ್ದನು. ಅವರು ಕಟ್ಟಿಗೆಗಳನ್ನು ಆರಿಸುತ್ತಿರುವಲ್ಲಿಯೇ ಗಿಡಗಂಟಿಗಳ ಮರೆಯಲ್ಲಿ ಹಾತೆಮುನು ಇದ್ದನು. ಈ ಗಂಡಹೆಂಡಿರ ಮಾತುಗಳು ಆತನಿಗೆ ಕೇಳಬರುತ್ತಿದ್ದುವಾದರೂ ಅವರಿಗೆ ಈತನು ಕಾಣಿಸುತ್ತಿರಲಿಲ್ಲ. ಮಧ್ಯಾಹ್ನದ ಬಿಸಿಲ ಝಳಕ್ಕೆ ಬಳಲಿ ಬಾಯಾರಿ ಮುದುಕನು—'ಅಯ್ಯೋ! ಇನ್ನು ನಾನು ಈ ಕಷ್ಟದ ಹೋರೆಯನ್ನು ಮಾಡಲಾರೆನು' ಎಂದು ಉಸಿರುಗರೆದು ಅಲ್ಲಿಯೇ ಕುಳಿತುಬಿಟ್ಟನು. ಆಗ ಹೆಂಡತಿಯು—ಅಹಾ! ಹಾತೆಮುನು ಕೈಗೆ ಸಿಕ್ಕಿದರೆ ನಮಗೆ ಈ ಕಷ್ಟದ ಹೋರೆಯನ್ನು ಇನ್ನು ಮಾಡಬೇಕಾಗುವುದಿಲ್ಲ ಎಂದು ನುಡಿದಳು. ಪರಮದಯಾಳುವಾದ ಹಾತೆಮುನು ಅವರ ಈ ದುಃಖದ ಮಾತುಗಳನ್ನು ಕೇಳಿ ಒಳಗೆ ನಿಲ್ಲಲಾರದೆ ಅವರೆದುರಿಗೆ ಬಂದು--ನಾನೇ ಹಾತೆಮುನು; ನನ್ನನ್ನು ಅರಸನ ಬಳಿಗೆ ಒಯ್ಯಿರಿ ಎಂದನು. ಮುದುಕನು—ನಾನು ಇಂತಹ ಕೆಲಸವನ್ನು ಮಾಡಲಾರೆನು. ತಾವು ಹೊರಟುಹೋಗಿರಿ ಎಂದನು. ಆಗ ಹಾತೆಮುನು—ಅಯ್ಯಾ, ನಾನು ಇನ್ನಾವನೊಬ್ಬ ದುಷ್ಟನ ಕೈಗೆ ಸಿಕ್ಕಿದರೆ ನನ್ನನ್ನು ಹೊಡೆದು ಬಡಿದು ಆತನು ಒಯ್ಯಬಹುದು. ನೀನು ಬಡವನೂ ಸಂಭಾವಿತನೂ ಆಗಿರುವೆ. ಆದದರಿಂದ ನೀನೇ ನನ್ನನ್ನು ಅರಸನ ಬಳಿಗೆ ಒಯ್ಯಿ ಎಂದನು. ಇಷ್ಟರಲ್ಲಿ ಆ ದಾರಿಯಿಂದ ಹೋಗುತ್ತಿದ್ದ ಇನ್ನೊಬ್ಬನು ಇವರ ಮಾತುಗಳ ಸಂದರ್ಭದಿಂದ ಈತನೇ ಹಾತೆಮುನೆಂದು ತಿಳಿದು ಆತನನ್ನು ಹಿಡಿದು

ಕೊಂಡು ಅರಸನ ಬಳಿಗೆ ನಡೆದನು. ಹಾತೆಮನು ಸನ್ನೆ ಮಾಡಿದುದರಿಂದ ಮುದು ಕನೂ ಸಂಗಡ ನಡೆದನು. ಹಾತೆಮನನ್ನು ಹಿಡಿದೊಯ್ದವನು ಅರಸನ ಬಳಿಗೆ ಹೋಗಿ-ಈತನೇ ಹಾತೆಮನು; ತಾವು ಪ್ರಕಟಿಸಿದ ಪಾರಿತೋಷಿಕವನ್ನು ಕೊಡಿರಿ ಎಂದು ಕೇಳಿದನು. ಆಗ ಹಾತೆಮತಾಇಯು—ಮಹಾರಾಜರೇ, ಈತನು ನನ್ನನ್ನು ಹಿಡಿದಿಲ್ಲ. ಈ ಬಡ ಮುದುಕನ ಕಷ್ಟದ ಸ್ಥಿತಿಯನ್ನು ಕಂಡು ನಾನೇ ಈತನ ಕೈಗೆ ಸಿಕ್ಕಿದ್ದೇನೆ. ಆದುದರಿಂದ ತಾವು ಪಾರಿತೋಷಿಕವನ್ನು ಈ ಮುದಕನಿಗೆ ಕೊಡಬೇಕು. ಎಂದು ಬಿನ್ನಯಿಸಿದನು. ಹಾತೆಮತಾಇಯ ಈ ದೊಡ್ಡತನಕ್ಕೆ ಅರಬರಾಜನು ಬೆರಗಾಗಿ, ಮೆಚ್ಚಿ ಕೈಜೋಡಿಸಿ— ಮುದುಕನಿಗೆ ಪಾರಿತೋಷಿಕವನ್ನು ಕೊಡುವೆನು; ಆದರೆ ತಾವು ನನ್ನ ತಪ್ಪನ್ನು ಕ್ಷಮಿಸಿ ತಮ್ಮ ರಾಜ್ಯವನ್ನು ತಾವೇ ಆಳಬೇಕು. ಎಂದು ಬೇಡಿಕೊಂಡನು.

---

ಅಣ್ಣನಲ್ಲಿ ವಿಧೇಯತೆ

## ೩೧ ಅರ್ಜುನ.

ಭರತಖಂಡದ ಅವಿಭಕ್ತಕುಟುಂಬಪದ್ಧತಿಯಲ್ಲಿ ಹಲವು ಗುಣಗಳುಂಟು. ಮನೆಯ ಯಜಮಾನನಿಗೆ ಎಲ್ಲರೂ ವಿಧೇಯರಾಗಿರುವರು. ಮನೆಯ ಯಜ ಮಾನನು ಎಲ್ಲರನ್ನು ಸಲಹುವ ಹೊರೆಯನ್ನು ಹೊರುವನು. ಈ ಕಾಲದಲ್ಲಿ ಅಣ್ಣನೊಂದೆಡೆಗೆ ತಮ್ಮನೊಂದೆಡೆಗೆ ಜೀವನವೃತ್ತಿಗಾಗಿ ಅತ್ತಿತ್ತ ಹೋಗಬೇಕಾ ಗುವದರಿಂದಲೂ, ಹೆಂಗಸರ ಅಸೂಯಾದಿ ದುರ್ಗುಣಗಳಿಂದಲೂ ಅವಿಭಕ್ತಪದ್ಧ ತಿಯು ಲೋಪವಾಗುತ್ತ ನಡೆದಿದೆ. ಈ ಹೊಸಕಾಲದಲ್ಲಿ ನಮ್ಮಲ್ಲಿ ಗೃಹೈಕ್ಯ ಭಾವನೆಯು ನಷ್ಟವಾಗುತ್ತ ನಡೆಯಿತು. ಆದರೆ ಜಪಾನ ಇಂಗ್ಲಂಡ್ ಮೊದ ಲಾದ ದೇಶಗಳಂತೆ ದೇಶಾಭಿಮಾನವು ಮಾತ್ರ ನಮ್ಮಲ್ಲಿ ಜಾಗ್ರತವಾಗಲಿಲ್ಲ.

ಮಹಾಭಾರತದೊಳಗಿನ ಎಲ್ಲ ಪಾತ್ರಗಳಲ್ಲಿ ಅರ್ಜುನನು ಶೌರ್ಯ, ಕಾರ್ಯನಿರ್ವಾಹಸಾಮರ್ಥ್ಯ ಮೊದಲಾದುವುಗಳಿಂದಲೂ, ಬೇರೆ ಸದ್ಗುಣ ಗಳಿಂದಲೂ ಶ್ರೇಷ್ಠನೆಂದು ಕಂಡು ಬರುವುದು. ಅಣ್ಣನಿಗೆ ತೋರಿಸಿದ ವಿಧೇ ಯತೆಯಲ್ಲಿ ಆತನು ಅನುಕರಣೀಯನಾಗಿರುವನು.

ಧರ್ಮರಾಜನು ದ್ಯೂತವ್ಯಸನದಿಂದ ದ್ರೌಪದಿಯನ್ನು ಪಣದಲ್ಲಿ ಸೋಲಲು ಕೌರವರು ರಾಜಸಭೆಯಲ್ಲಿ ಆಕೆಯ ಅಪಮಾನ ಮಾಡತೊಡಗಿದರು. ಆಗ ಭೀಮಸೇನನು ಧರ್ಮರಾಜನನ್ನು ಹಳಿಯತೊಡಗಿದನು. ಆಗ ಅರ್ಜುನನು—

ಅಣ್ಣಾ, ಶತ್ರುಗಳು ನಗುವಂತೆ ಮಾಡಬೇಡ, ಧರ್ಮವನ್ನು ಸ್ಮರಿಸು; ಹಿರಿಯ ಅಣ್ಣನ ಅಪಮಾನ ಮಾಡಬೇಡ ಎಂದು ಭೀಮನಿಗೆ ಹೇಳಿದನು.

ಚಿತ್ರರಥನೆಂಬ ಗಂಧರ್ವನು ದುರ್ಯೋಧನನನ್ನು ಸೆರೆಹಿಡಿದು ಒಯ್ಯಲು ಮಹಾತ್ಮನಾದ ಯುಧಿಷ್ಠಿರನು ತಮ್ಮ ಬಂಧುವಾದ ಆತನನ್ನು ಬಿಡಿಸಿಕೊಂಡು ಬಾ ಎಂದು ಅರ್ಜುನನಿಗೆ ಹೇಳಿದನು. ಅರ್ಜುನನು ಹಿಂದೆ ಮುಂದೆ ನೋಡದೆ ಬಿಡಿಸಿಕೊಂಡು ಬಂದನು.

ಅಣ್ಣನ ಅಪ್ಪಣೆಯಿಂದ ಅರ್ಜುನನು ದೇವಲೋಕಕ್ಕೆ ಅಸ್ತ್ರಪ್ರಾಪ್ತಿಗಾಗಿ ಹೋದಾಗ ದೇವೇಂದ್ರನು ಆತನಿಗೆ ನಿತ್ಯಸ್ವರ್ಗವಾಸದ ಲೋಭವನ್ನು ತೋರಿಸಿದನು. ಆದರೆ ಅರ್ಜುನನು ಆ ಮೋಹಕ್ಕೆ ವಶವಾಗದೆ—ನಾನು ಅಣ್ಣನ ಅಪ್ಪಣೆಯಮೇರೆಗೆ ಇಲ್ಲಿ ಅಸ್ತ್ರವಿದ್ಯೆಯನ್ನು ಕಲಿತು ಮರಳಿ ಹೋಗುವವನಲ್ಲದೆ ಸ್ವರ್ಗಸುಖವನ್ನು ಬಯಸುವುದಿಲ್ಲ ಎಂದು ಹೇಳಿದನು.

ಯುದ್ಧದಲ್ಲಿ ಎದುರಿಸಿದಾಗಳಲ್ಲದೆ ಬೇರೆ ಸಮಯದಲ್ಲಿ ಧರ್ಮರಾಜನ ಒಂದು ರಕ್ತಬಿಂದುವನ್ನು ಕೂಡ ನೆಲದ ಮೇಲೆ ಕೆಡವಿದವರನ್ನು ಸಂಹರಿಸುವೆನೆಂದು ಅರ್ಜುನನು ಪ್ರತಿಜ್ಞೆಮಾಡಿದ್ದನು. ಉತ್ತರಗೋಗ್ರಹಣದ ತರುವಾಯ ಧರ್ಮರಾಜ ( ಕಂಕಭಟ್ಟ ) ನು ಸಾರಥಿಯಾದ ಬೃಹನ್ನಳೆಯನ್ನೇ ( ಅರ್ಜುನನನ್ನೇ ) ಮತ್ತೆ ಮತ್ತೆ ಹೊಗಳತೊಡಗಲು ವಿರಾಟರಾಜನು ಸಿಟ್ಟಾಗಿ ಕೈಯೊಳಗಿನ ದಾಳಗಳನ್ನು ಧರ್ಮರಾಜನ ಮೋರೆಯ ಮೇಲೆ ಒಗೆದನು. ಧರ್ಮರಾಜನ ಹಣೆಯಿಂದ ನೆತ್ತರು ಸುರಿಯತೊಡಗಿತು. ಕ್ಷಮಾಶೀಲನಾದ ಧರ್ಮರಾಜನು ಅದನ್ನು ನೆಲದ ಮೇಲೆ ಬೀಳಗೊಡದೆ ತಮಗೆ ಆಶ್ರಯವನ್ನಿತ್ತ ವಿರಾಟನನು ಕಾಪಾಡಿದನು. ಇಲ್ಲದಿದ್ದರೆ ಅರ್ಜುನನು ತನ್ನ ಅಣ್ಣನಿಗೆ ಅಪಮಾನ ಮಾಡಿದ ವಿರಾಟರಾಜನ ಸರ್ವಸ್ವನಾಶ ಮಾಡುತ್ತಿದ್ದನು.

ಸುಭದ್ರೆಯನ್ನು ಮದುವೆಯಾಗುವಾಗ ಅರ್ಜುನನು ತಮ್ಮ ಆಪ್ತಾಲೋಚಕನಾದ ಶ್ರೀಕೃಷ್ಣನ ಸಂಮತಿಯನ್ನು ಪಡೆದುಕೊಂಡಿದ್ದರೂ ಅಣ್ಣನಾದ ಧರ್ಮರಾಜನ ಸಂಮತಿಯನ್ನೂ ಅಪೇಕ್ಷಿಸಿದನು.

ಅಭಿಮನ್ಯುಬಾಲಕನು ಚಕ್ರವ್ಯೂಹವನ್ನು ಭೇದಿಸುವ ಕೌಶಲವನ್ನರಿತಿದ್ದನು. ಆದರೆ ಅದರಿಂದ ಹೊರಗೆ ಬರುವುದನ್ನು ಅರಿತಿರಲಿಲ್ಲ. ಈ ಮಾತನ್ನು

ಧರ್ಮರಾಜನು ಪೂರ್ಣವಾಗಿ ಬಲ್ಲವನಾಗಿದ್ದರೂ ದ್ರೋಣನ ಆಕ್ರಮಣ ಕಾಲ ದಲ್ಲಿ ಆವೇಶಗೊಂಡವನಾಗಿ ಬಾಲಕನಿಗೆ ವ್ಯೂಹದಲ್ಲಿ ಪ್ರವೇಶಿಸುವುದಕ್ಕೆ ಅಪ್ಪಣೆ ಯನ್ನಿತ್ತನು. ಇದರಲ್ಲಿಯೇ ಅರ್ಜುನನ ಆ ಪ್ರಾಣಪ್ರಿಯ ಪುತ್ರನು ಮಡಿದನು. ಆದರೆ ಮಗನನ್ನು ಕುರಿತು ಶೋಕಮಾಡುವಾಗ ಈ ಮಾತಿನ ಉಲ್ಲೇಖವು ಅರ್ಜುನನ ಬಾಯಿಂದ ಸ್ವಲ್ಪವೂ ಹೊರಡಲಿಲ್ಲ.

ಕುರುಕ್ಷೇತ್ರದ ಮಹಾಯುದ್ಧವು ಆರಂಭವಾಗುವ ಪೂರ್ವದಲ್ಲಿ ಸ್ವಜನ ಕ್ಷಯವಾಗುವುದೆಂಬ ಕನಿಕರದಿಂದ ಅರ್ಜುನನು ಯುದ್ಧವನ್ನು ಮಾಡುವ ಮನ ಸ್ಸಿಲ್ಲದವನಾಗಿದ್ದನು. ಶ್ರೀಕೃಷ್ಣನು ಆತನಿಗೆ ನಿಷ್ಕಾಮಕರ್ಮಾನುಷ್ಠಾನ ಮಾಡುವ, ಮತ್ತು ಕ್ಷತ್ರಿಯ ಧರ್ಮವನ್ನು ಪಾಲಿಸುವ ಉಪದೇಶವನ್ನು ಮಾಡಿದ ಬಳಿಕ ಆತನು ಯುದ್ಧಕ್ಕೆ ತೊಡಗಿದನು. ಧರ್ಮರಾಜನು ಯುದ್ಧವು ಮುಗಿದ ಬಳಿಕ ಸ್ವಜನರಕ್ತದಿಂದ ತೋಯ್ದ ರಾಜ್ಯವನ್ನು ಆಳಲು ಒಪ್ಪಲಿಲ್ಲ. ಅರ್ಜುನನು, ಧರ್ಮರಾಜನಿಗೆ ಅರಸೊತ್ತಿಗೆ ದೊರೆಯಬೇಕೆಂದೇ ಯುದ್ಧವನ್ನು ಮಾಡಿದ್ದನು. ಮತ್ತು ತನ್ನ ಪ್ರಾಣಪ್ರಿಯ ಪುತ್ರನನ್ನು ಕಳೆದುಕೊಂಡಿದ್ದನು ಅರ್ಜುನನು ಈ ಮಾತುಗಳನ್ನು ಧರ್ಮರಾಜನಿಗೆ ತಿಳಿಸಹೋಗಿ ಆತನಿಂದ ಬಿರುನುಡಿಗಳನ್ನು ಮಾತ್ರ ಆಡಿಸಿಕೊಂಡನು. ಅರ್ಜುನನು ಆತನ ಮಾತುಗಳಿಗೆ ಪ್ರತಿಯಾಗಿ ಏನೂ ಮಾತಾಡಲಿಲ್ಲ.

ಹಿರಿಯರಿಗೆ ಎದುರುತ್ತರವನ್ನು ಕೊಡುವುದಕ್ಕೆ ಈಗಿನವರು ಹೇಸುವುದಿಲ್ಲ. ಅವರ ಅಪಮಾನವಾಗದಂತೆ ಪ್ರಯತ್ನಿಸುವುದಂತೂ ದೂರದಲ್ಲುಳಿಯಿತು; ತಿರುಗಿ ತಾವೇ ಅವರ ಅಪಮಾನ ಮಾಡುತ್ತಿರುತ್ತಾರೆ. ಈ ನೀತಿಗೇಡಿತನವು ಅನುಚಿತವು.

---

ನಂಬಿಗೆಯ ಮಹಿಮೆ.

## ೩೨ ಮಿ. ಫಾಕ್ಸ್.

ಒಂದಾನೊಂದು ದಿವಸ ವಕ್ತಾರನೆಂದು ಹೆಸರಾದ ಫಾಕ್ಸ್ ಸಾಹೇಬನು ಒಂದು ಪತ್ರವನ್ನು ಬರೆದು ಅದರಮೇಲೆ ಹಣವನ್ನೆಣಿಸಿ ಎಣಿಸಿ ಇಡುತ್ತಿದ್ದನು. ಈ ಹೊತ್ತಿಗೆ ಇನ್ನೊಬ್ಬ ಅಂಗಡಿಕಾರನು ಬಂದು—ನೀವು ಕೊಡಬೇಕಾಗಿದ್ದ ಹಣವನ್ನು ಈಗಲೇ ಕೊಟ್ಟರೆ ಒಳ್ಳೆಯದಾಗುವುದು; ಸಾವುಕಾರರ ಹಣವನ್ನು

ಇಂದೇ ಮುಟ್ಟಿಸಬೇಕಾಗಿರುವುದರಿಂದ ಹಣದ ಅವಶ್ಯಕತೆಯುಂಟೆಂದು ಬಂದೆನು; ಇವು ' ಬಿಲ್ಲು ರಿಸೀಟು ' ಗಳು ಎಂದು ಹೇಳಿ ಅಲ್ಲಿ ನಿಂತನು. ಫಾಕ್ಸ್ ಸಾಹೇಬನು—೩, ೪ ದಿವಸಗಳ ತರುವಾಯ ನಿಮ್ಮ ಹಣವನ್ನು ಕೊಡುವೆನು; ಈ ಹಣವನ್ನು ಶೇರಿಡೆನನಿಗೆ ಕೊಡಬೇಕಾಗಿದೆ; ಆತನ ಬಳಿಯಲ್ಲಿ ಲೇಖವನ್ನೇನೂ ಕೊಡದೆ ಕೈಗಡವೆಂದು ತಂದಿರುವೆನು; ನನಗೆ ಆಕಸ್ಮಿಕ ಮರಣವೊದಗಿದರೆ ಆತನಿಗೆ ಸಲ್ಲಬೇಕಾದ ಹಣದ ಪ್ರಮಾಣಲೇಖವು ( ಪುರಾವೆ) ಆತನ ಬಳಿಯಲ್ಲಿ ಇಲ್ಲ. ಎಂದು ಹೇಳಿದನು. ಬಂದ ಅಂಗಡಿಕಾರನು ಅನುಮಾನಪಡದೆ-ಇದು ನೋಡಿರಿ; ನಿಮ್ಮ ಉದ್ದರಿಲೆಕ್ಕವನ್ನು ಬರೆದಿದ್ದ ಪುಟವನ್ನೂ, ಬಿಲ್ಲನ್ನೂ ಹರಿದು ಚೆಲ್ಲುವೆನು ಎಂದು ಹೇಳಿ ಆ ಕಾಗದಗಳನ್ನು ಚೂರು ಚೂರು ಮಾಡಿ ಚೆಲ್ಲಿ ನನ್ನ ಬಳಿಯಲ್ಲಿಯೂ ಪ್ರಮಾಣಲೇಖವನ್ನಿಟ್ಟುಕೊಳ್ಳಲಿಲ್ಲವೆಂದು ಹೇಳಿದನು. ಅಂಗಡಿಕಾರನು ತನ್ನ ಮೇಲಿನ ನಂಬಿಗೆಯಿಂದ ಹಾಗೆ ಮಾಡಿದುದನ್ನು ಕಂಡು ಈ ಸೌಜನ್ಯಕ್ಕೂ ವಿಶ್ವಾಸಕ್ಕೂ ಮೋಹಿತನಾದ ಫಾಕ್ಸ್‌ಸಾಹೇಬನು ಒಳ್ಳೆಯದು, ನೀವೇ ಈ ಹಣವನ್ನು ಈಗ ಒಯ್ಯಿರಿ; ನಿಮ್ಮ ಉದ್ದರಿಯು ಮೊದಲಿನದಾಗಿದೆ; ಶೇರಿಡೆನನಿಗೇ ೩, ೪ ದಿವಸಗಳ ತರುವಾಯ ಹಣವನ್ನು ಕಳುಹುವೆನು; ನಿಮಗೆ ಹಣದ ಆವಶ್ಯಕತೆಯು ಹೆಚ್ಚಿಗೆ ಇದ್ದಂತೆ ತೋರುವುದು; ಶೇರಿಡೆನನಿಗೆ ಈ ಮಾತನ್ನು ಬರೆಯುವ ಪತ್ರದ ಸಂಗಡ ಅವನ ಹಣದ ಪ್ರಮಾಣಲೇಖವೊಂದನ್ನು ಬರೆದು ಕಳುಹಿದರಾಯಿತು ಎಂದು ಹೇಳಿ ಹಣವನ್ನು ಬಂದ ಅಂಗಡಿಕಾರನಿಗೆ ಕೊಟ್ಟನು.

ವಿಶ್ವಾಸಕ್ಕೆ ತಕ್ಕವರಾರೆಂಬ ಜನಪರೀಕ್ಷೆಯು ಇಲ್ಲದ ಕಾರಣದಿಂದಲೇ ನಮ್ಮದೇಶದ ಹಲವುಜನ ವ್ಯಾಪಾರಿಗಳು ದುರ್ಮುಖರಾಗಿ ತಮ್ಮ ವ್ಯಾಪಾರವನ್ನು ಮುಳುಗಿಸಿಕೊಳ್ಳುವರು. ಪರರ ಹಣವನ್ನು ಮುಳುಗಿಸುವುದಕ್ಕೆ ಹೇಸಿಕೊಳ್ಳುವ ಜನರು ನಮ್ಮ ದೇಶದಲ್ಲಿಯೂ ಹೆಚ್ಚಿಗೆ ಇರುವರು; ತನ್ನನ್ನು ನಂಬಿದವರನ್ನು ಕೆಡಿಸುವ ಜನರು ಎಲ್ಲಿಯೂ ವಿರಳ.

---

ಪ್ರೀತಿಯ ಮಹಿಮೆ **೩೩ ಶ್ರೀ ಈಶ್ವರಚಂದ್ರ ವಿದ್ಯಾಸಾಗರ.**

ಒಂದಾನೊಂದು ದಿನ ಬಂಗಾಲದ ಸುಪ್ರಸಿದ್ಧ ವಿದ್ವಾಂಸನಾದ ವಿದ್ಯಾಸಾಗರ ಮಹಾಶಯನು ದಾರಿಯ ಹಿಡಿದು ಹೋಗುತ್ತಿರುವಾಗ ಒಬ್ಬ ಚಿಕ್ಕ ತಕ್ಕಡಿಯ ಅಂಗಡಿಕಾರನು ಆತನನ್ನು ಕರೆದನು. ವಿದ್ಯಾಸಾಗರನು ಹೋಗಿ ಅಂಗಡಿಯ ಕಟ್ಟೆಯ ಮೇಲೆ ಹಾಸಿದ ಚಾಪೆಯ ಮೇಲೆ ಕುಳಿತುಕೊಂಡು ಆತನೊಡನೆ ಮಾತಾಡುತ್ತಿದ್ದನು. ಆಗ ವಿದ್ಯಾಸಾಗರನ ಮೇಲೆ ಭಕ್ತಿಯುಳ್ಳ ಒಬ್ಬ ಶ್ರೀಮಂತನು ಕುದುರೆಯ ಗಾಡಿಯಲ್ಲಿ ಆ ದಾರಿಯ ಹಿಡಿದು ಹೋಗುತ್ತಿದ್ದನು. ವಿದ್ಯಾಸಾಗರನನ್ನು ಕಂಡ ಕೂಡಲೆ ವಾಡಿಕೆಯಂತೆ ಗಾಡಿಯ ನಿಲ್ಲಿಸಿ ಕೆಳಗಿಳಿದು ನಮಸ್ಕಾರ ಮಾಡಿ ಹೋಗಬೇಕೆಂದು ಬಯಸಿದನು. ಆದರೆ ಆ ಸಣ್ಣ ಅಂಗಡಿಕಾರನ ಎದುರಿಗೆ ಹಾಗೆ ಮಾಡುವುದಕ್ಕೆ ಸಂಕೋಚಪಟ್ಟು ಹಾಗೆಯೇ ಮುಂದೆ ಹೋದನು. ವಿದ್ಯಾಸಾಗರನನ್ನು ಕಂಡು ನಮಿಸಿ ಹೋಗಿದ್ದರೆ ಅದಕ್ಕೆ ಎಲ್ಲರೂ ಒಳ್ಳೆಯ ಕೆಲಸವೆಂದೇ ಹೇಳುತ್ತಿದ್ದರು. ಆದರೆ ಆ ಶ್ರೀಮಂತನು ತಾನು ಹಾಗೆ ಮಾಡಿದರೆ ಜನರು ಏನೆಂದಾರೆಂದು ಹೆದರಿದನು. ಆತನು ಜನರೆಂದರೆ ಇಂಗ್ರೇಜಿಯನ್ನು ಕಲಿತು ಬುನಾದಿಯ ಧರ್ಮವಿಚಾರಗಳನ್ನೂ ಹಿರಿಯರು ಕಿರಿಯರೆಂಬ ಮಾನಮರ್ಯಾದೆಗಳನ್ನೂ ತೊರೆದ ಲಘುಸ್ವಭಾವದ ತನ್ನ ಕೆಲ ಜನ ಗೆಳೆಯರೆಂದೇ ತಿಳಿದುಕೊಂಡಿದ್ದನು. ಆದದರಿಂದ ಸೇವಕನಿಗೆ ಗಾಡಿಯ ನಿಲ್ಲಿಸ ಹೇಳಿದ ಮುಂದಿನ ಕ್ಷಣದಲ್ಲಿಯೇ ಮತ್ತೆ ಮುಂದೆ ಹೊಡೆಯ ಹೇಳಿದನು.

ಸ್ಪಷ್ಟಭಾಷಿಯಾದ ವಿದ್ಯಾಸಾಗರ ಮಹಾಶಯನು ತನ್ನ ಬಳಿಗೆ ಆ ಗೃಹಸ್ಥನು ಮತ್ತೊಮ್ಮೆ ಬಂದಾಗ 'ಆ ದಿವಸ ಬಹಳ ತೊಂದರೆಗೊಳಗಾಗಿದ್ದಿರಿ; ಗಾಡಿಯಿಂದಿಳಿದು ನನ್ನ ಬಳಿಗೆ ಬರಬೇಕೆಂದಿದ್ದಿರಿ; ಆದರೆ ಅಂಗಡಿಕಾರನು ಅಡ್ಡಿಯಾದನು' ಎಂದು ಹೇಳಿದನು. ಆಗ ಆ ಶ್ರೀಮಂತನು—'ಸ್ವಾಮೀ, ಅಹುದು, ತಾವು ಕಂಡಕಡೆಯಲ್ಲಿ ಹಾಗೆ ಕುಳಿತುಕೊಂಡರೆ ನಮಗೆ ಸಂಕೋಚವಾಗುವುದು' ಎಂದನು. ಅದಕ್ಕೆ ವಿದ್ಯಾಸಾಗರನು—ರಾಯರೇ, ನಮ್ಮ ಯಾವುದೊಂದು ಆಚರಣೆಯು ಪರರ ಸಂಕೋಚಕ್ಕೆ ಆಸ್ಪದವಾಗುವುದೆಂಬುದು ಬಹಳ ದುಃಖಕರವು; ನಮ್ಮೊಡನೆ ಸಂಬಂಧವನ್ನು ಬಿಟ್ಟರೆ ಈ ತೊಂದರೆಯೇ ಇಲ್ಲವಲ್ಲ! ಪ್ರೀತಿಯ ಮಹತ್ವದ ಜ್ಞಾನವು ಲೋಪಹೊಂದಿದವರ ಸಲುವಾಗಿ ನಾನು ಯಾವ ಬಂಧುವನ್ನೂ ಬಿಡಲಾರೆನು' ಎಂದು ಹೇಳಿದನು.

---

ಅವಧಾನ.

## ೩೪ ನ್ಯೂಟನ್.

ಗುರುತ್ವಾಕರ್ಷಣಶಕ್ತಿಯ ದ್ವಿತೀಯ ಶೋಧಕನಾದ ನ್ಯೂಟನನು ಅರ್ಥ ಶಾಸ್ತ್ರದ ವಿಷಯವಾಗಿಯೂ ವಿಚಾರಮಾಡುತ್ತಿದ್ದನು. ವಿಚಾರಕ್ಕೆ ತೊಡಗಿದಾಗ ಬೇರೆ ಯಾವ ವಿಷಯವೂ ಅವನ ಚಿತ್ತಚಾಂಚಲ್ಯವನ್ನುಂಟುಮಾಡುತ್ತಿರಲಿಲ್ಲ.

ಒಮ್ಮೊಮ್ಮೆ ಆತನು ಉಡುಪನ್ನು ಧರಿಸುವಾಗ ಒಂದು ಕಾಲಿನ ಇಜಾರ ವನ್ನು ಹಾಕಿಕೊಂಡು ಅಷ್ಟರಲ್ಲಿಯೇ ಯಾವುದೊಂದು ಘನವಿಚಾರವು ಮನಸ್ಸಿ ನಲ್ಲಿ ಬಂದರೆ ಇನ್ನೊಂದು ಕಾಲಿನ ಇಜಾರವನ್ನು ಹಾಕಿಕೊಳ್ಳುವ ಲಕ್ಷವಿಲ್ಲದೆ ಆ ವಿಚಾರವನ್ನು ನಿರ್ಣಯಿಸುವ ವರೆಗೆ ಹಾಗೆಯೇ ೨-೩ ಘಂಟೆ ಕಾಲವನ್ನು ಕಳೆದುದೂ ಉಂಟು. ಹಲವು ವೇಳೆ ಊಟದ ಟೇಬಲಿನ ಮೇಲೆ ಬಡಿಸಿದ ಬಳಿಕ ಅವನು ಊಟಕ್ಕೆ ಬರುವುದು ೩-೪ ಘಂಟೆ ತಡವಾಗುತ್ತಿತ್ತು. ಒಂದು ದಿವಸ ಆತನ ಮಿತ್ರನಾದ ಡಾ. ಸ್ಟಕ್ಲಿಯು ಆತನ ಮನೆಗೆ ಬಂದನು. ಆಗ ನ್ಯೂಟನನು ತನ್ನ ಲಾಯಬ್ರರಿಯಲ್ಲಿ ವಿಚಾರಮಗ್ನನಾಗಿ ಕುಳಿತಿದ್ದನು. ಡಾ. ಸ್ಟಕ್ಲಿಯು ಭೋಜನಶಾಲೆಯಲ್ಲಿ ಆತನ ದಾರಿಯನ್ನು ನೋಡತೊಡಗಿದನು. ಬಹಳ ವೇಳೆ ಯಾದರೂ ನ್ಯೂಟನನು ಬರಲಿಲ್ಲ. ಅಲ್ಲಿ ನ್ಯೂಟನನ ಸಲುವಾಗಿ ಒಂದು ಎಡೆಯು ಬಡಿಸಲ್ಪಟ್ಟಿತ್ತು. ಡಾ. ಸ್ಟಕ್ಲಿಯು ಆ ಆಹಾರವನ್ನು ತಾನು ಭೋಜನ ಮಾಡಿ ಆ ಎಂಜಲ ಎಡೆಯನ್ನು ಮೊದಲಿನಂತೆ ಮುಚ್ಚಿ ಇಟ್ಟನು. ಸ್ವಲ್ಪ ಹೊತ್ತಿನ ತರುವಾಯ ನ್ಯೂಟನನು ಅಲ್ಲಿಗೆ ಬಂದು ತನ್ನ ಮಿತ್ರನನ್ನು ಕುರಿತು 'ನನಗೆ ಬಹಳ ಹಸಿವೆಯಾಗಿದೆ' ಎಂದು ಹೇಳಿ ಊಟದ ಎಡೆಯ ಮೇಲಿನ ಮುಚ್ಚಳವನ್ನು ತೆರೆದು ನೋಡಿದನು. ಅದು ಉಂಡ ಪಾತ್ರೆಯಾಗಿತ್ತು. ಆಗ ನ್ಯೂಟನನು ಸ್ವಲ್ಪ ನಕ್ಕು ಮಿತ್ರನನ್ನು ಕುರಿತು–ನಾನು ಭ್ರಮಿಸಿ ಊಟಮಾಡಿಲ್ಲ ವೆಂದು ತಿಳಿದುಕೊಂಡಿದ್ದೆನು; ನನ್ನ ಊಟವಾದಂತಿದೆ ಎಂದು ಹೇಳಿದನು!

ಇಂತಹ ಅವಧಾನದ ಬಲದಿಂದಲೇ ಆತನು ಗುರುತ್ವಾಕರ್ಷಣಶಕ್ತಿಯ ನಿಯಮಗಳನ್ನು ಕಂಡುಹಿಡಿದು ಶಾಸ್ತ್ರೀಯ ಜಗತ್ತಿನಲ್ಲಿ ಚಿರಸ್ಮರಣೀಯನಾಗಿ ರುವನು. ಈ ಅಸಾಧಾರಣ ವಿದ್ವಾಂಸನು—ನನಗೆ ಜ್ಞಾನಸಮುದ್ರದಲ್ಲಿ ಇನ್ನೂ ಪ್ರವೇಶವಿಲ್ಲ. ದಂಡೆಯ ಮೇಲಿನ ಹರಳುಗಳನ್ನು ಆರಿಸಿಕೊಂಡು ಬಾಲಕನಂತೆ ತಿರುಗಾಡುವವನಾಗಿದ್ದೇನೆ, ಎಂದು ಹೇಳುತ್ತಿದ್ದನು.

ಉಪನಿಷತ್ತಿನಲ್ಲಿ—ಯಾವನು ನಾನು ತಿಳಿದಿಲ್ಲವೆಂದು ತಿಳಿದಿರುವನೋ ಅವನೇ ಸ್ವಲ್ಪ ತಿಳಿದಿರುವನು ಎಂದು ಹೇಳಿದೆ.

---

ದೊಡ್ಡತನ.

## ೩೫ ಪ್ರಿನ್ಸ್ ವಸಿರುದ್ದೀನ್.

ಟಿಪ್ಪುಸುಲ್ತಾನನ ವಂಶದ ಪ್ರಿನ್ಸ್ ವಸಿರುದ್ದೀನನು ಚುಚುಡಾ ಎಂಬಲ್ಲಿ ಇರುತ್ತಿದ್ದನು. ಒಂದಾನೊಂದು ದಿವಸ ಮನೆಯ ಹೊರಗೆ ಅಂಗಳದ ಚೌಕಿನಲ್ಲಿ ಕುಳಿತುಕೊಂಡಿದ್ದನು. ಬಳಿಯಲ್ಲಿ ಚಿನ್ನದ ರಿಪಿಟರ್ ಗಡಿಯಾರವೂ ಸರಪಳಿಯೂ ನೆಲದಮೇಲೆ ಇದ್ದವು. ಆಹೊತ್ತಿಗೆ ಕೆಲವು ಜನ ಅಲ್ಲಿಯ ಮೊಗಲರು ಬಂದರು. ಎತ್ತರವಾಗಿ ಮುಂಡಾಸವನ್ನು ಸುತ್ತಿದ ಒಬ್ಬ ಮೊಗಲನು ಮಾತಾಡುತ್ತ ಬಹಳ ಹೊತ್ತು ಕುಳಿತುಕೊಂಡನು. ಪ್ರಿನ್ಸನು ಏತಕ್ಕೋ ಒಮ್ಮೆ ಮನೆಯೊಳಗೆ ಹೋಗಿ ತಿರುಗಿ ಅಲ್ಲಿಗೆ ಬಂದಾಗಲೂ ಆ ಮೊಗಲನು ಅಲ್ಲಿಯೇ ಕುಳಿತಿದ್ದನು. ಆತನು ಪ್ರಿನ್ಸನಿಗೆ ಸಲಾಂ ಮಾಡಿ ಹೋಗಿಬರುವೆನೆಂದು ಹೇಳಿ ಎದ್ದುನಿಂತಾಗ ಆತನ ಮುಂಡಾಸದೊಳಗಿಂದ ರಿಪಿಟರ್ ಗಡಿಯಾರವು ಟಂಗ್ ಎಂದು ಅರ್ಧ ಘಂಟೆಯನ್ನು ಬಾರಿಸಿತು. ಪ್ರಿನ್ಸನು ತನ್ನ ಗಡಿಯಾರವನ್ನಿಟ್ಟ ಸ್ಥಳದ ಕಡೆಗೆ ನೋಡಿದನು. ಅಲ್ಲಿ ಗಡಿಯಾರವಿರಲಿಲ್ಲ. ಆತನು ಕೂಡಲೆ ಮನೆಯೊಳಗೆ ಅವಸರದಿಂದ ಹೋದನು. ಅದೇ ಹೊತ್ತಿಗೆ ಆತನ ಮಗನಾದ ಪ್ರಿನ್ಸ್ ಅಮಿರುದ್ದೀನನು ಮನೆಯೊಳಗಿಂದ ಹೊರಗೆ ನಡೆದಿದ್ದನು. ಆಗ ಆ ಮೊಗಲನು ತನ್ನ ಮುಂಡಾಸದೊಳಗಿಂದ ಗಡಿಯಾರವನ್ನು ಹೊರದೆಗೆದು ಇಡುತ್ತಿದ್ದುದನ್ನು ಆತನು ನೋಡಿದನು. ಆತನು ಆ ಮೊಗಲನನ್ನು ಹಿಡಿಯಬೇಕೆಂದು ಧಾವಿಸುವಷ್ಟರಲ್ಲಿ ತಂದೆಯ ಅಸ್ಪಷ್ಟ ಶಬ್ದವನ್ನಾಲಿಸಿ ಹಿಂದಿರುಗಿ ನೋಡಿದನು. ತಂದೆಯು ಮೂಗಿನ ಮೇಲೆ ತರ್ಜನಿ ಬೆರಳನ್ನಿಟ್ಟುಕೊಂಡು ಕಣ್ಸನ್ನೆಮಾಡಿ ಸುಮ್ಮನೆ ಒಳಗೆ ಬರಲು ಸೂಚಿಸಿದನು. ಮಗನು ಒಳಗೆಬರಲು ಪ್ರಿನ್ಸ್‌ವಸಿರುದ್ದೀನನು 'ಆತನ ಮುಂಡಾಸದಲ್ಲಿ ಗಡಿಯಾರವು ಟಂಗ್ ಎಂದು ಘಂಟೆಹೊಡೆದುದನ್ನು ಕೇಳಿ ನಾನು ಆತನ ಮೋರೆಯ ಕಡೆಗೆ ನೋಡಿದಾಗ ಆತನ ಮೋರೆಯು ಕಪ್ಪಿಟ್ಟಿತ್ತು; ಮರಣವು ಸಮೀಪಿಸಿದಂತೆ ಆದ ಆತನ ಮೋರೆಯ ಕಳೆಯನ್ನು ಕಂಡು ನಾನು ಓಡಿ ಇತ್ತ ಬಂದೆನು' ಎಂದು ಹೇಳಿದನು.

---

ದೊಡ್ಡತನ.

## ೧೨ ಶಿವಾಜಿಯೂ, ವಿನಾಯಕದೇವನೂ.

ಶಿವಾಜಿ ಮಹಾರಾಜನು ದಿಲ್ಲಿಗೆ ಔರಂಗಜೇಬ ಬಾದಶಹನ ಭೆಟ್ಟಿಗೆ ಹೋದಾಗ ಮೋಸದಿಂದ ಆತನನ್ನು ಬಾದಶಹನು ಸೆರೆಯಲ್ಲಿರಿಸಿದನೆಂಬುದೂ, ಶಿವಾಜಿಯು ಯುಕ್ತಿಯಿಂದ ಪಾರಾಗಿ ದಕ್ಷಿಣಕ್ಕೆ ಬಂದನೆಂಬುದೂ ಇತಿಹಾಸ ಪ್ರಸಿದ್ಧವಾಗಿದೆ.

ಶಿವಾಜಿಯು ದಿಲ್ಲಿಯಿಂದ ಪಾರಾಗಿ ಹೊರಟಾಗ ಸಂಗಡ ಆತನ ಮಗನಾದ ಸಾಂಬಾಜಿಯೂ, ಶಿವಾಜಿಯ ಜೀವದ ಗೆಳೆಯರಾದ ಯೇಸಾಜಿ ಕಂಕ, ತಾನಾಜಿ ಮಾಲಸುರೆ ಎಂಬವರೂ ಇದ್ದರು. ನಾಲ್ವರೂ ಬೈರಾಗಿಗಳ ವೇಷದಿಂದ ಹೊರಟಿದ್ದರು. ಇತ್ತ ಔರಂಗಜೇಬನು ಶಿವಾಜಿಯನ್ನು ಹಿಡಿದೊಪ್ಪಿಸಿದವರಿಗೆ ೨ ಸಾವಿರ ಹೊನ್ನುಗಳನ್ನು ಇನಾಮಾಗಿ ಕೊಡುವೆನೆಂದು ರಾಜ್ಯದಲ್ಲೆಲ್ಲ ಪ್ರಕಟಿಸಿದ್ದನು. ನಾಲ್ವರೂ ಒಟ್ಟಾಗಿ ನಡೆದರೆ ತಮ್ಮನ್ನು ಯಾರಾದರೂ ಗುರುತಿಸಬಹುದೆಂದು ತಿಳಿದು ಶಿವಾಜಿಯು ತನ್ನ ಗೆಳೆಯರಿಗೆ—ನಾನು ಹಿಂದೆ ಬರುವೆನು, ನೀವು ಮುಂದೆ ನಡೆಯಿರಿ; ನಾವೆಲ್ಲರೂ ನಮ್ಮ ರಾಜ್ಯಕ್ಕೆ ಸುಖವಾಗಿ ಹೋದರೆ ಒಳ್ಳೆಯದು; ನನಗೇನಾದರೂ ನಡುವೆ ಸಂಕಟವೊದಗಿದರೆ ನೀವು ಸಾಂಬಾಜಿಯನ್ನು ಅರಸನನ್ನು ಮಾಡಿಕೊಂಡು ರಾಜ್ಯವನ್ನು ಸಾಗಿಸಿರಿ ಎಂದು ಹೇಳಿದನು.

❀ ❀ ❀ ❀

ಈ ಮಾತು ಶಿವಾಜಿಯ ಗೆಳೆಯರಿಗೆ ಸರಿದೋರಲಿಲ್ಲ. ಅದರಿಂದ ಅವರೆಲ್ಲರೂ ಸೇರಿಯೇ ಮುಂದೆ ನಡೆದರು. ಅವರು ಮುರ್ಶಿದಾಬಾದದ ಬಳಿಯಲ್ಲಿ ಒಂದು ಅಡವಿಯಲ್ಲಿ ನಡೆದಾಗ ಒಂದು ಹೆಬ್ಬುಲಿಯು ಅವರ ಮೇಲೆ ಸಾಗಿ ಬಂದಿತು. ಶಿವಾಜಿಯು ತನ್ನ ಮಗನನ್ನು ಸಂರಕ್ಷಿಸಿರೆಂದು ತನ್ನ ಸಂಗಡಿಗರಿಗೆ ಹೇಳಿ ತಾನೊಬ್ಬನೇ ಹುಲಿಯನ್ನು ಎದುರಿಸಿದನು. ಹುಲಿಯು ಮೈಮೇಲೆ ಏರಿ ಬಂದ ಕೂಡಲೆ ತನ್ನ ಕೈಯೊಳಗಿನ ಬಡಿಗೆಯಿಂದ ಅದು ನಿರ್ವಿಣ್ಣವಾಗುವ ಹಾಗೆ ಹೊಡೆದನು. ಹುಲಿಯು ಮತ್ತೆ ಮತ್ತೆ ಚೇತರಿಸಿಕೊಂಡು ಮೇಲೇರಿ ಬಂದರೂ ಶಿವಾಜಿಯು ಬಡಿಗೆಯಿಂದ ಹೊಡೆಯುತ್ತಲೇ ಇದ್ದನು. ಅಷ್ಟರಲ್ಲಿ

ಆ ಬಡಿಗೆಯು ಎರಡುತುಂಡಾಯಿತು. ಹುಲಿಯು ಆವೇಶಗೊಂಡು ಮತ್ತೆ ಮೈಮೇಲೆ ಏರಿಬರಲು ತಾನಾಜಿಯು ಮುಂದೆ ಬಂದು ತನ್ನ ಕೈಯೊಳಗಿನ ಬಡಿಗೆಯಿಂದ ಬಲು ಬಲವಾದ ಏಟನ್ನು ಹಾಕಿದನು. ಹುಲಿಯು ಅಂಜಿ ಓಡಿ ಹೋಯಿತು. ಆದರೆ ಅದು ಕೊನೆಯಸಾರೆ ಹಾರಿ ಮೇಲೆ ಬಿದ್ದಾಗ ಅದರ ಪಂಜರದ ಚಿವುರಿಕೆಯಿಂದ ಶಿವಾಜಿಯ ಹೆಗಲಿಗೆ ಬಹಳ ಗಾಯವಾಗಿತ್ತು. ಯೇಸಾಜಿಯು ಗಾಯದ ತೊಪ್ಪಲನ್ನು ತಂದು ಕಟ್ಟಿದನು. ಅವರು ಮೆಲ್ಲಮೆಲ್ಲನೆ ಮುರ್ಶಿದಾಬಾದಕ್ಕೆ ನಡೆದರು.

❦ ❦ ❦ ❦

ಮುರ್ಶಿದಾಬಾದಕ್ಕೆ ಬಂದು ಮುಟ್ಟಿದ ಕೂಡಲೆ ಶಿವಾಜಿಗೆ ಜ್ವರ ಬಂದವು. ಎಲ್ಲರೂ ಅಂಜಿದರು. ಹೊರಗೆ ಬಯಲಲ್ಲಿ ಇಳಿದುಕೊಂಡರೆ ಜ್ವರವು ಹೆಚ್ಚಾಗುವ ಭಯ; ಯಾರ ಮನೆಯಲ್ಲಾದರೂ ಇಳಿದುಕೊಂಡರೆ ತಮ್ಮ ಬಾಯಿಂದ ತಪ್ಪಿ ಏನಾದರೂ ಮಾತು ಹೊರಟಾಗ ಜನರು ತಮ್ಮ ಗುರುತು ಹಿಡಿದರೆ ಮತ್ತೆ ಬಾದಶಹನ ಸ್ವಾಧೀನವಾಗುವ ಭಯ. ಆದರೂ ಅವರು ಮುಂದುಗಾಣದೆ ಯಾರ ಮನೆಗಾದರೂ ಹೋಗಿ ಇಳಿದುಕೊಳ್ಳುವುದನ್ನೇ ನಿರ್ಧರಿಸಿದರು. ಆದರೆ ಊರಲ್ಲಿ ಯಾರೂ ಸ್ಥಳವನ್ನು ಕೊಡಲೊಲ್ಲರು. ಕೊನೆಗೆ ವಿನಾಯಕದೇವನೆಂಬ ಒಬ್ಬ ವಿದ್ವಾಂಸನಾದ ದಯಾಶೀಲ ಬ್ರಾಹ್ಮಣನು ಇವರನ್ನು ತನ್ನ ಮನೆಯಲ್ಲಿ ಇಳಿಸಿಕೊಂಡನು. ಈ ಬ್ರಾಹ್ಮಣನು ಗೃಹಸ್ಥಾಶ್ರಮಿಯಾಗಿದ್ದರೂ ಏನೋ ಒಂದು ಸಂದರ್ಭದಲ್ಲಿ ವೈರಾಗ್ಯವನ್ನು ತಾಳಿದ್ದನು. ಮನೆಯಲ್ಲಿ ಆತನ ಮುದುಕಿಯಾದ ತಾಯಿಯೊಬ್ಬಳೇ. ಆತನು ಶುಕ್ಲವೃತ್ತಿಮಾಡಿ ತಮ್ಮಿಬ್ಬರ ಉಪಜೀವನ ಸಾಗಿಸುತ್ತಿದ್ದನು. ಶಕ್ಯವಾದ ಮಟ್ಟಿಗೆ ಪರರಿಗೆ ಉಪಕಾರ ಮಾಡುವಲ್ಲಿ ವೇಳೆಗಳೆಯುವನು.

ಆ ಬ್ರಾಹ್ಮಣನ ಮನೆಯಲ್ಲಿ ಶಿವಾಜಿಯ ಪ್ರಕೃತಿಗೆ ಗುಣವಾಗುತ್ತ ನಡೆಯಿತು. ಆದರೆ ಪೂರ್ಣ ಗುಣವಾಗುವುದಕ್ಕೆ ಇನ್ನೂ ಬಹಳ ದಿವಸಗಳು ಹಿಡಿಯುವುವೆಂದು ತೋರಿಬರಲು ಶಿವಾಜಿಯು ತಾನು ಆರಂಭಿಸಿದ ಸ್ವರಾಜ್ಯ ಸ್ಥಾಪನೆಯ ಕೆಲಸವು ನಡುವೇ ತಡೆದು ನಿಲ್ಲಬಾರದೆಂದು ಆಲೋಚಿಸಿ ಯೇಸಾಜಿ, ತಾನಾಜಿ ಇವರನ್ನು ಕುರಿತು—ನೀವು ಈಗಲೇ ಸಾಂಬಾಜಿಯೊಡನೆ ದಕ್ಷಿಣಕ್ಕೆ ಹೊರಡಿರಿ, ಎಂದು ಅಪ್ಪಣೆ ಮಾಡಿದನು. ಇದನ್ನು ಕೇಳಿ

ಅವರಿಗೆ ಬಹಳ ಕಷ್ಟವೆನಿಸಿತು. ಪರದೇಶದಲ್ಲಿ ಬೇನೆಯಿಂದ ಬಳಲುತ್ತಿರುವ ತಮ್ಮ ಜೀವದ ಗೆಳೆಯನನ್ನು ಬಿಟ್ಟುಹೋಗುವುದಕ್ಕೆ ಅವರ ಕಾಲುಗಳು ಹೇಗೆ ಏಳಬೇಕು? ಇತ್ತ ಶಿವಾಜಿಯ ಅಪ್ಪಣೆಯು ಮೀರಬಾರದಂಥದು. ಆದರಿಂದ ಅವರು ನಡುವಿನದೊಂದು ಹಾದಿಯನ್ನು ಹುಡುಕಿದರು:—ಯೇಸಾಜಿಯು ಸಾಂಬಾಜಿಯನ್ನು ಕರೆದುಕೊಂಡು ದಕ್ಷಿಣಕ್ಕೆ ಹೋಗಬೇಕು; ತಾನಾಜಿಯು ಮುರ್ಶಿದಾಬಾದದಲ್ಲಿಯೇ ಶಿವಾಜಿಗೆ ತಿಳಿಯಗೊಡದಂತೆ ಆತನ ಸಹಾಯಕ್ಕೆ ನಿಲ್ಲಬೇಕು. ಆಗ ಅವರು ವಿನಾಯಕದೇವನನ್ನು ಕುರಿತು—ಸ್ವಾಮಿ, ನಮ್ಮ ಗೆಳೆಯನಿಗೆ ಗುಣವಾದುದರಿಂದ ನಾವು ಮೂವರು ವಿಶ್ವೇಶ್ವರನಿಗೆ ಬೇಡಿಕೊಂಡಿದ್ದ ಹರಕೆಯನ್ನು ತೀರಿಸುವುದಕ್ಕೆ ಕಾಶಿಗೆ ಹೋಗಿಬರುವೆವು. ಅಲ್ಲಿಯವರೆಗೆ ದಯಮಾಡಿ ನಮ್ಮ ಸ್ನೇಹಿತನನ್ನು ಸಲಹಬೇಕು ಎಂದು ಹೇಳಿ ತಾನಾಜಿ, ಯೇಸಾಜಿ, ಸಾಂಬಾಜಿ ಈ ಮೂವರೂ ಹೊರಟರು.

❧ ❧ ❧ ❧

ಬ್ರಾಹ್ಮಣನು ನಿತ್ಯದ ಶುಕ್ಲವೃತ್ತಿಯಿಂದ ತಾಯಿಯನ್ನೂ ಶಿವಾಜಿಯನ್ನೂ ಸಲಹುತ್ತಿದ್ದನು. ಒಂದು ದಿವಸ ಆತನಿಗೆ ತೀರ ಸ್ವಲ್ಪ ಭಿಕ್ಷೆ ಬಂದಿತು. ಬಂದ ಕಾಳನ್ನು ಬೇಯಿಸಿ ತಾಯಿಗೂ, ಬೇನೆಯ ಬೈರಾಗಿ (ಶಿವಾಜಿ) ಗೂ ಬಡಿಸಿ ತಾನು ಉಪವಾಸವಿದ್ದನು. ಈ ಮಾತು ಶಿವಾಜಿಗೆ ತಿಳಿದುಬರಲು ಅವನಿಗೆ ಬಹಳ ವ್ಯಥೆಯಾಯಿತು! ಬ್ರಾಹ್ಮಣರನ್ನೂ, ಗೋಗಳನ್ನೂ, ಪವಿತ್ರವಾದ ಧರ್ಮವನ್ನೂ ಕಾಪಾಡಬೇಕೆಂದು ಹೊರಟಿದ್ದ ನಾನು, ಒಬ್ಬ ಭಿಕ್ಷುಕ ಬ್ರಾಹ್ಮಣನ ಉಪವಾಸಕ್ಕೆ ಕಾರಣವಾಗುವಂಥ ವೇಳೆಯು ಬಂದಿತೇ? ಈತನು ನನಗಾಗಿ ಇನ್ನೂ ಎಷ್ಟು ದಿವಸ ಉಪವಾಸ ಮಾಡಿರುವನೋ? ಎಂಬ ವಿಚಾರವು ಆತನಿಗೆ ಹೊಳೆದ ಕೂಡಲೆ ದುಃಖಿತನಾಗಿ ಈ ದೊಡ್ಡ ಮನಸ್ಸಿನ ಬ್ರಾಹ್ಮಣನ ಉಪಕಾರವನ್ನು ಹೇಗೆ ತೀರಿಸಲಿ ಎಂದು ಚಿಂತೆಗೊಳಗಾದನು. ಏನು ಮಾಡಬೇಕೆಂಬುದು ಆತನಿಗೆ ತಿಳಿಯದಂತಾಯಿತು. ಈತನನ್ನು ದಕ್ಷಿಣಕ್ಕೆ ಕರೆದೊಯ್ಯುವೆನೆಂದರೆ ಈತನು ತನ್ನ ವೃದ್ಧ ಮಾತೃಶ್ರೀಯನ್ನು ಬಿಟ್ಟು ಬಂದಾನೆಯೇ?. ಇದು ಆಗದ ಮಾತು. ದಕ್ಷಿಣಕ್ಕೆ ಹೋದಬಳಿಕ ಈತನಿಗೆ ಹಣವನ್ನು ಕಳುಹುವೆನೆಂದರೆ ನಾನು ದಕ್ಷಿಣಕ್ಕೆ ಹೋಗಿ ಮುಟ್ಟುವೆನೆಂಬ ನೇಮವೆಲ್ಲಿದೆ? ಹೀಗೆ ಆಲೋಚಿಸುತ್ತಿರುವಾಗ ಆತನ ದೊಡ್ಡ ಮನಸ್ಸಿನಲ್ಲಿ ಒಂದು ಉಪಾಯವು ಹೊಳೆಯಿತು.

ಆಗ ಆತನು ಆ ಬ್ರಾಹ್ಮಣನಿಂದ ಬರೆವಣಿಗೆಯ ಉಪಕರಣಗಳನ್ನು ತರಿಸಿಕೊಂಡು ಒಂದು ಪತ್ರವನ್ನು ಬರೆದು ಅದನ್ನು ಕಾಗದದ ಚೀಲದಲ್ಲಿರಿಸಿ ಅಂಟಿಸಿದನು. ಮತ್ತು ಆ ಪತ್ರವನ್ನು ಅಲ್ಲಿಯ ಸುಭೇದಾರನ ಕೈಯಲ್ಲಿ ಕೊಡುವಂತೆ ಹೇಳಿದನು. ಸುಭೇದಾರನು ಪತ್ರವನ್ನು ಓದಿಕೊಂಡನು. ಅದರಲ್ಲಿ ಬರೆದುದೇನೆಂದರೆ—“ ಪತ್ರವನ್ನು ತಂದಿರುವ ಬ್ರಾಹ್ಮಣನ ಮನೆಯಲ್ಲಿ ಈಗ ಶಿವಾಜಿಯು ಇರುತ್ತಾನೆ. ಈ ಬ್ರಾಹ್ಮಣನೊಡನೆ ಬಂದು ಶಿವಾಜಿಯನ್ನು ನಿರ್ಭಯವಾಗಿ ಹಿಡಿಯಿರಿ. ಆದರೆ ಸರಕಾರವು ಪ್ರಕಟಿಸಿದ ೨ ಸಾವಿರ ಹೊನ್ನುಗಳನ್ನು ಮಾತ್ರ ಬ್ರಾಹ್ಮಣನಿಗೆ ಕೊಡಲೇಬೇಕು. ಇನಾಮಿನ ಹಣವನ್ನು ಕೊಡದೆ ಶಿವಾಜಿಯನ್ನು ಹಿಡಿಯಲು ಯತ್ನಿಸಿದರೆ ಪಶ್ಚಾತ್ತಾಪಬಡಬೇಕಾದೀತು. ”

ಈ ಸ್ವರ್ಗೀಯವಾದ ಮಹಿಮೋನ್ನತಿಯು ವರ್ಣನೆಗೂ ಕಲ್ಪನೆಗೂ ನಿಲುಕದಂಥದು.

ಪತ್ರವನ್ನೋದಿದೊಡನೆ ಸುಭೇದಾರನ ಆನಂದಕ್ಕೆ ಪಾರವಿಲ್ಲದಂತಾಯಿತು. ಈಗಿಂದೀಗಲೇ ಶಿವಾಜಿಯನ್ನು ಹಿಡಿದೊಯ್ದು ಔರಂಗಜೇಬನೆದುರಿಗೆ ನಿಲ್ಲಿಸಿದರೆ ತನಗೊಂದು ಪ್ರಾಂತವು ಇನಾಮಾಗಿ ದೊರೆಯುವುದೆಂದು ಆತನು ಹಿಗ್ಗಿದನು. ಆತನು ಶಿವಾಜಿಯನ್ನು ಒಮ್ಮೆ ದಿಲ್ಲಿಯಲ್ಲಿ ನೋಡಿದ್ದನು. ಆದುದರಿಂದ ಶಿವಾಜಿಯನ್ನು ಗುರುತಿಸುವುದಕ್ಕೆ ತೊಂದರೆಯಿರಲಿಲ್ಲ. ಬ್ರಾಹ್ಮಣನಿಗೆ ಬಾದಶಹನಿಂದ ಇನಾಮು ದೊರೆಯುವುದಂತೂ ಸರಿಯೇ. ಆದರೆ ಆ ಹಣವನ್ನು ನಾನೇ ಇಲ್ಲಿ ಕೊಟ್ಟುಬಿಟ್ಟರೆ ಈ ಸುದ್ದಿಯು ಯಾರಿಗೂ ತಿಳಿಯದಂತಾಗುವುದು. ಇಲ್ಲವಾದರೆ ಈ ಬ್ರಾಹ್ಮಣನು ಈ ಸುದ್ದಿಯನ್ನು ಅತ್ತಿತ್ತ ಹರಡಿಬಿಡುವನು. ಅದರಿಂದ ಶಿವಾಜಿಯನ್ನು ಗುಪ್ತವಾಗಿ ದಿಲ್ಲಿಗೆ ಸಾಗಿಸುವುದು ಶಕ್ಯವಾಗಲಾರದು; ಎಂದು ಆಲೋಚಿಸಿ ಸುಭೇದಾರನು ತನ್ನ ಸ್ವಂತದ ೨ ಸಾವಿರ ಹೊನ್ನುಗಳನ್ನೂ, ನಂಬಿಗೆಯ ಕೆಲವು ಆಳುಗಳನ್ನೂ ತೆಗೆದುಕೊಂಡು ಆ ಬ್ರಾಹ್ಮಣನ ಮನೆಗೆ ಬಂದನು. ಸುಭೇದಾರನು ಶಿವಾಜಿಯನ್ನು ಗುರುತಿಸಿದನು; ಮತ್ತು ಬ್ರಾಹ್ಮಣನೆದುರಿಗೆ ೨ ಸಾವಿರ ಹೊನ್ನುಗಳನ್ನು ಸುರುವಿ ಶಿವಾಜಿಯನ್ನು ಸೆರೆಹಿಡಿದೊಯ್ದನು. ಆದರೆ ಇದೆಲ್ಲವನ್ನು ನೋಡಿ ಆ ಬ್ರಾಹ್ಮಣನು ಇದು ಯಾವುದನ್ನೂ ಅರಿಯದೆ ಮರಮರನೆ ಮರುಗಹತ್ತಿದನು. ತನ್ನ ಮನೆಯಲ್ಲಿದ್ದ ಅತಿಥಿಯನ್ನು ಯವನರು ಸೆರೆಹಿಡಿದೊಯ್ಯುವುದಕ್ಕೆ ತಾನು ಕಾರಣನಾದೆನೆಂದು ಆತನು ಶೋಕಮಾಡಲಾ

ರಂಭಿಸಿದನು. ಎದುರಿಗಿದ್ದ ಹೊನ್ನಿನ ರಾಶಿಯನ್ನು ಒದೆದು ಆಚೆಗೆ ದೂಡಿದನು. ಈ ಸಮಯದಲ್ಲಿ ಈ ಬೈರಾಗಿಯ ಸ್ನೇಹಿತರಲ್ಲೊಬ್ಬನು ಕಾಶಿಗೆ ಹೋದವನು ಮರಳಿ ತನ್ನೆದುರಿಗೆ ಬರುತ್ತಿರುವುದನ್ನು ಆ ಬ್ರಾಹ್ಮಣನು ಕಂಡನು. ಆತನನ್ನು ಕಂಡಮೇಲಂತೂ ತನಗೆ ಒಪ್ಪಿಸಿದವನ ಗತಿಯು ಏನಾಯಿತೆಂಬುದನ್ನು ಆತನಿಗೆ ಹೇಗೆ ಹೇಳಲಿ? ಎಂದು ಮತ್ತಿಷ್ಟು ಅಳತೊಡಗಿದನು. ತಾನಾಜಿಯು ಕಾಶಿಗೆ ಹೋಗುತ್ತೇನೆಂದು ಹೇಳಿದವನು ಅಂದಿನಿಂದ ಆ ಬ್ರಾಹ್ಮಣನ ಮನೆಯ ಹತ್ತರ ದಲ್ಲಿಯೇ ಕಾಣದಂತೆ ಇರುತ್ತಿದ್ದನು. ಇಂದು ತನ್ನ ಪ್ರಾಣಸಖನನ್ನು ಯವನರು ಹಿಡಿದೊಯ್ಯುತ್ತಿರುವುದನ್ನು ಕಂಡು ಆತನ ಮನಸ್ಸು ಹೇಗಾಗಿರಬಹುದೆಂಬು ದನ್ನು ಹೇಳುವುದು ಕಷ್ಟವು. ತಾನಾಜಿಯು ಶಿವಾಜಿಯ ಹಿಂದೆಯೇ ಹೊರ ಟನು. ಆದರೆ ಶಿವಾಜಿಯನ್ನು ಸುಭೇದಾರನ ಮನೆಯ ಒಳಗೆ ಒಯ್ದು ಬಳಿಕ ತಾನಾಜಿಯನ್ನು ಒಳಗೆ ಬಿಡಲಿಲ್ಲವಾದುದರಿಂದ ನಿರುಪಾಯನಾಗಿ ಹಿಂದಿರುಗಿ ಮುಂದುಗಾಣದೆ ಅತ್ತಿತ್ತ ಭ್ರಮಿಸಹತ್ತಿದ್ದನು. ಕೊನೆಗೆ ತಾನಾಜಿಯು, ನಡೆದ ಸಂಗತಿಯನ್ನಾದರೂ ತಿಳಿದುಕೊಳ್ಳಬೇಕೆಂದು ಆ ಬ್ರಾಹ್ಮಣನ ಮನೆಗೆ ಹೊರ ಟಿದ್ದನು.

ಬ್ರಾಹ್ಮಣನು ಶೋಕವಿಹ್ವಲನಾದುದನ್ನು ಕಂಡು ತಾನಾಜಿಯೂ ಅತ್ಯಂತ ದುಃಖಿತನಾಗಿ ಕೊನೆಗೆ ಹೇಗೋ ಬ್ರಾಹ್ಮಣನನ್ನು ಸಂತಯಿಸಿ, ನಡೆದ ಸಮಾ ಚಾರವನ್ನು ಕೇಳಿದನು. ಬ್ರಾಹ್ಮಣನು ಶಿವಾಜಿಯು ಪತ್ರಕೊಟ್ಟುದನ್ನು ಹಿಡಿದು ಎಲ್ಲವನ್ನೂ ಹೇಳಿದನು. ಬಳಿಕ ತಾನಾಜಿಯು—ನನ್ನ ಅಣ್ಣನು ಈಚೆಗೆ ದುಃಖಿ ದಲ್ಲಿರುತ್ತಿದ್ದನೇ ಎಂದು ಕೇಳಿದನು. ಆಗ ಬ್ರಾಹ್ಮಣನು ತಾನು ಒಂದು ದಿವಸ ಉಪವಾಸವಿದ್ದುದು ಆತನಿಗೆ ತಿಳಿದುಬಂದಿತೆಂದೂ, ಆಗಿನಿಂದ ಆತನು ಖಿನ್ನ ನಾಗಿರುತ್ತಿದ್ದನೆಂದೂ ಹೇಳಿದನು. ತಾನಾಜಿಗೆ ಎಲ್ಲವೂ ತಟ್ಟನೆ ಹೊಳೆಯಿತು. ಶಿವಾಜಿಯು ಬ್ರಾಹ್ಮಣನಿಗೆ ಪ್ರತ್ಯುಪಕಾರ ಮಾಡುವುದಕ್ಕೆ ತಾನಾಗಿ ಹೀಗೆ ಮಾಡಿದನೆಂದು ಆತನಿಗೆ ತಿಳಿಯಿತು. ಶಿವಾಜಿಯ ಸ್ವಭಾವವನ್ನು ತಾನಾಜಿಯು ಚೆನ್ನಾಗಿ ಬಲ್ಲವನಾಗಿದ್ದನು. ಬಳಿಕ ತಾನಾಜಿಯು ತಾವು ಯಾರೆಂಬುದನ್ನು ಬ್ರಾಹ್ಮಣನಿಗೆ ಹೇಳಿದನು. ಆಗ ಬ್ರಾಹ್ಮಣನು ಬೆರಗಾದನು. ಹಿಂದುಧರ್ಮ ಪ್ರತಿಪಾಲಕನಾದ ಮಹಾತ್ಮನನ್ನು ಯವನರ ವಶಕ್ಕೆ ಕೊಡುವಲ್ಲಿ ತಾನು ಕಾರಣವಾದೆನೆಂದು ಆ ಬ್ರಾಹ್ಮಣನಿಗೆ ಮತ್ತೆ ಶೋಕವು ಆವರಿಸಿಕೊಂಡಿತು.

ತಾನಾಜಿಯು ಮುಂದೇನು ಮಾಡಬೇಕೆಂದು ಸುಭೇದಾರನ ಮನೆಯ ಕಡೆಗೆ ಹೋಗಿ ಅಲ್ಲಿ ಯುಕ್ತಿಯಿಂದ—ಈ ದಿವಸ ಹಿಡಿದ ಮನುಷ್ಯನನ್ನು ಸುಭೇದಾರರು ೨೦ ಜನ ಕಾವಲುಗಾರರೊಡನೆ ದಿಲ್ಲಿಗೆ ಈ ದಿನ ರಾತ್ರಿಯೇ ಒಯ್ಯುವರೆಂಬ ಗುಪ್ತವರ್ತಮಾನವನ್ನು ತಿಳಿದುಕೊಂಡನು. ಮತ್ತೆ ಸೆಟ್ಟಗೆ ಆ ಬ್ರಾಹ್ಮಣನ ಮನೆಗೆ ಬಂದನು. ಇಬ್ಬರೂ ಬಹಳ ಹೊತ್ತು ಏನೇನೋ ಆಲೋಚಿಸಿದರು. ಕೊನೆಗೆ—ಸುಭೇದಾರನು ಕೊಟ್ಟ ಹಣದಲ್ಲಿ ಬೇಕಾದಷ್ಟು ಹಣವನ್ನು ವೆಚ್ಚಮಾಡಿ ೫೦ ಜನ ಸಶಸ್ತ್ರರಾದ ಸಿಪಾಯಿಗಳನ್ನು ತಯಾರಿಸಿಕೊಳ್ಳಬೇಕೆಂದೂ, ಅವರೊಡನೆ ತಾನಾಜಿಯು ತಮಗೆ ಹುಲಿಯು ಎದುರಿಸಿದ ಅಡವಿಯಲ್ಲಿ ಈಗಲೇ ಹೋಗಿ ಅಡಗಿಕೊಳ್ಳಬೇಕೆಂದೂ, ನಿರ್ಣಯಿಸಿದರು. ಅದರಂತೆ ತಾನಾಜಿಯು ಸಿದ್ಧತೆ ಮಾಡಿಕೊಂಡು ಅಡವಿಗೆ ಹೋದನು.

ಮಧ್ಯರಾತ್ರಿಗೆ ಸುಭೇದಾರನು ೨೦ ಜನ ಕಾವಲುಗಾರರೊಡನೆ ಆ ಅಡವಿಗೆ ಬಂದನು. ಕೂಡಲೆ ತಾನಾಜಿಯ ಕಡೆಯ ಜನರು ಒಮ್ಮೆಲೆ ಭಯಂಕರವಾಗಿ ಕೂಗಿ ಅವರ ಮೇಲೆ ಸಾಗಿಹೋದರು. ಸುಭೇದಾರನ ಜನರು ತಾನಾಜಿಯ ಜನರಿಗೆ ಈಡಾಗಲಿಲ್ಲ. ಸುಭೇದಾರನ ಜನರನ್ನೆಲ್ಲ ಕೊಂದು ಹಾಕಿ ತಾನಾಜಿಯ ಜನರು ಶಿವಾಜಿಯನ್ನೂ ತಾನಾಜಿಯನ್ನೂ ಅವರ ಇಚ್ಛೆಯಂತೆ ಆ ಅಡವಿಯಲ್ಲಿಯೇ ಬಿಟ್ಟು ಪಟ್ಟಣದ ಕಡೆಗೆ ಓಡಿಹೋದರು.

❧ ❧ ❧ ❧

ಶಿವಾಜಿಯು ತಾನಾಜಿಯನ್ನು ಆಲಿಂಗಿಸಿಕೊಂಡನು. ಮತ್ತು ತನ್ನ ಬಿಡುಗಡೆಗಾಗಿ ನಡೆದ ಸಮಾಚಾರವನ್ನೆಲ್ಲ ಕೇಳಿಕೊಂಡನು. ತಾನಾಜಿಯ ಪ್ರೇಮವನ್ನೂ ವಿನಾಯಕದೇವನ ಲೋಕೋತ್ತರವಾದ ದೊಡ್ಡ ಮನಸ್ಸನ್ನೂ ಕಂಡು ಆತನ ಕುತ್ತಿಗೆಯ ಸಿರಗಳು ಬಿಗಿದುವು. ಆನಂದಾಶ್ರುಗಳು ಉದುರಿದುವು. ಬಳಿಕ ಇಬ್ಬರೂ ದಕ್ಷಿಣಕ್ಕೆ ಹೊರಟರು. ಸುಮಾರು ಒಂದುವರೆ ತಿಂಗಳಿಗೆ ತಮ್ಮ ರಾಜ್ಯವನ್ನು ಸೇರಿದರು.

---

ಕರ್ತವ್ಯಕರ್ಮ

## ೧೩ ರಾಜಪುತ್ರನೂ ನ್ಯಾಯಾಧೀಶನೂ.

ಇಂಗ್ಲಂಡದ ಅರಸನಾದ ೪ನೆಯ ಹೇನ್ರಿಯ ಹಿರಿಯ ಮಗನು ೫ನೆಯ ಹೇನ್ರಿ ಎಂಬ ಹೆಸರಿನಿಂದ ಪಟ್ಟಕ್ಕೆ ಕುಳಿತ ಬಳಿಕ ಶೂರನೂ ರಾಜಕಾರ್ಯ ದಕ್ಷನೂ ಎಂದು ಹೆಸರುವಾಸಿಯಾದನು. ಆದರೆ ಯುವರಾಜನಾಗಿದ್ದಾಗ ಪೋಕರಿಯೂ ತುಂಟನೂ ಆಗಿದ್ದನು. ಹಲವು ಜನ ಪೋಕರಿಗಳನ್ನು ಕಟ್ಟಿಕೊಂಡು ಊರಲ್ಲಿ ಗೊಂದಲ ಹಾಕುತ್ತಿದ್ದನು.

ಒಂದು ದಿವಸ ಈ ಯುವರಾಜನ ಒಬ್ಬ ಗೆಳೆಯನಿಗೆ ಅವನ ಅಪರಾಧಕ್ಕಾಗಿ ಮುಖ್ಯ ನ್ಯಾಯಾಧೀಶನು ಸೆರೆಮನೆಗೆ ಹೋಗುವ ಶಿಕ್ಷೆಯನ್ನು ಕೊಟ್ಟನು. ಆಗ ಯುವರಾಜನೂ ಕೋರ್ಟಿಗೆ ಬಂದಿದ್ದು ನ್ಯಾಯಾಧೀಶನು ತನ್ನ ಮಿತ್ರನಿಗೆ ಶಿಕ್ಷೆ ಹೇಳಿದುದನ್ನು ಕೇಳಿ ಸಂತಾಪಗೊಂಡನು. ಮತ್ತು ನ್ಯಾಯಾಧೀಶನ ಮರ್ಯಾದೆಯನ್ನಿಡದೆ ಆತನಿಗೆ ತನ್ನ ಮಿತ್ರನನ್ನು ಬಿಟ್ಟುಬಿಡಬೇಕೆಂದು ಅಪ್ಪಣೆ ಮಾಡಿದನು. ಮತ್ತು ರಾಜಪುತ್ರನ ಸ್ನೇಹಿತನಿಗೆ ಸೆರೆಮನೆಯ ಶಿಕ್ಷೆಯೇ? ಇದು ತೀರ ಅನುಚಿತವು; ಆದುದರಿಂದ ನಾನು ಯುವರಾಜನಿದ್ದುದರಿಂದ ನಿಮಗೆ ಅಪ್ಪಣೆ ಮಾಡುವುದೇನೆಂದರೆ-ಈತನನ್ನು ದಾರಿಹೋಗುವ ಕಳ್ಳನೆಂದು ಭಾವಿಸದೆ ಈಗಲೇ ಬಿಡುಗಡೆ ಮಾಡಬೇಕು ಎಂದು ಕಠಿಣವಾಗಿ ಹೇಳಿದನು. ಆಗ ಇದನ್ನು ಕೇಳಿ ನ್ಯಾಯಾಧೀಶನು—ನ್ಯಾಯಾಸನದಲ್ಲಿ ಕುಳಿತಿರುವವರೆಗೆ ನಾನು ಯುವರಾಜನನ್ನರಿಯೆನು; ನ್ಯಾಯ ತೀರಿಸುವಲ್ಲಿ ನಾನು ಪಕ್ಷಪಾತಮಾಡುವುದಿಲ್ಲವೆಂದು ಆಣೆ ತೊಟ್ಟಿದ್ದೇನೆ. ಆದುದರಿಂದ ನನಗೆ ನ್ಯಾಯವಾಗಿ ತೋರಿದುದನ್ನು ಮಾಡದೆ ಎಂದೂ ಬಿಡಲಾರೆನು ಎಂದು ಉತ್ತರಕೊಟ್ಟನು. ಆಗ ಯುವರಾಜನು ಅತಿಶಯವಾಗಿ ರೇಗಿ ಸೆರೆಯಾಳಾದ ಸ್ನೇಹಿತನನ್ನು ಒತ್ತಾಯದಿಂದ ಬಿಡಿಸುವುದಕ್ಕೆ ಪ್ರಯತ್ನಿಸತೊಡಗಿದನು. ನ್ಯಾಯಾಧೀಶನು—ಹೀಗೆ ಮಾಡಲು ನಿಮಗೆ ಅಧಿಕಾರವಿಲ್ಲ; ಕೋರ್ಟಿನಲ್ಲಿ ಸುಮ್ಮನೆ ದಂಗೆ ಮಾಡಬೇಡಿರಿ ಎಂದು ಹೇಳಿದನು. ಈ ಮಾತಿನಿಂದ ಯುವರಾಜನು ಅಂಗಾಲಿನಿಂದ ನಡುನೆತ್ತಿಯವರೆಗೆ ಉರಿದೆದ್ದು ಕೂಡಲೆ ನ್ಯಾಯಾಧೀಶನ ಕೆನ್ನೆಯ ಮೇಲೆ ಹೊಡೆದನು. ಆಗ ನ್ಯಾಯಾಧೀಶನು ಯುವರಾಜನನ್ನೂ, ಆತನ ಸ್ನೇಹಿತನನ್ನೂ ಈಗಲೇ ಸೆರೆಮನೆಯ ಸೋಬತಿಮಾಡಿರೆಂದು ಸೇವಕರಿಗೆ ಅಪ್ಪಣೆ ಮಾಡಿದನು. ಮತ್ತು ಅಲ್ಲಿ ನೆರೆದವರನ್ನು ಕುರಿತು ಶಾಂತ

ತನದಿಂದ—ನಾನು ಹೀಗೆ ಮಾಡಿದುದು ನನಗಾದ ಅಪಮಾನಕ್ಕೋಸ್ಕರ ಅಲ್ಲ. ಈತನು ಕಾಯದೆಗೆ ಅಂದರೆ, ದೇಶದ ಅರಸನಿಗೆ ಅಪಮಾನಮಾಡಿದುದರಿಂದ ಈ ರಾಜಪುತ್ರನಿಗೆ ಶಿಕ್ಷೆ ಕೊಡಲೇಬೇಕಾಯಿತು ಎಂದು ಹೇಳಿ ಆತನನ್ನು ಕುರಿತು—ಯುವರಾಜರೇ, ನೀವು ಮುಂದೆ ಅರಸರಾಗತಕ್ಕವರು, ಅರಸನ ಕಾಯದೆಗೆ ನೀವೇ ಮಾನ ಕೊಡದಿದ್ದರೆ ನಿಮ್ಮ ರಾಜ್ಯದ ಪ್ರಜೆಗಳು ಹೇಗೆ ಕೊಡಬೇಕು? ಎಂದು ಕೇಳಿದನು.

ಈ ಮಾತು ಯುವರಾಜನ ಮನಸ್ಸಿಗೆ ಚೆನ್ನಾಗಿ ಹೊಳೆಯಿತು. ಆತನು ಗೊಂದಲವನ್ನೆಲ್ಲ ಬಿಟ್ಟು ನ್ಯಾಯಾಧೀಶನಿಗೆ ವಿನಯದಿಂದ ಕೈಮುಗಿದು ಸುಮ್ಮನೆ ಸೆರೆಮನೆಗೆ ನಡೆದನು. ಯುವರಾಜನ ತಂದೆಯು—ಆರನೆಯ ಹೇನ್ರಿಯು—ಈ ಸುದ್ದಿಯನ್ನು ಕೇಳಿ ಸಿಟ್ಟಾಗದೆ ಸಂತೋಷದಿಂದ—ನನ್ನ ರಾಜ್ಯದಲ್ಲಿ ಇಷ್ಟು ಮಟ್ಟಿಗೆ ನಿಷ್ಪಕ್ಷಪಾತಿಯಾದ ನ್ಯಾಯಾಧೀಶನೂ, ಕಾಯದೆಗೆ ಮಾನಕೊಡುವ ರಾಜಪುತ್ರನೂ ಇರುವದರಿಂದ ನಾನು ಧನ್ಯನು ಎಂದು ಉದ್ಗಾರವನ್ನು ಹೊರಡಿಸಿದನು.

ಮುಂದೆ ತಂದೆಯ ತರುವಾಯ ಯುವರಾಜನು ಸಿಂಹಾಸನವೇರಲು ಆ ನ್ಯಾಯಾಧೀಶನು ಇನ್ನು ತನಗೆ ಅಪಾಯವಾಗುವದೆಂದು ಹೆದರಿದನು. ಆದರೆ ಹಾಗೇನೂ ನಡೆಯಲಿಲ್ಲ. ನ್ಯಾಯಾಧೀಶನು ಹೊಸ ಅರಸನನ್ನು ಕಾಣುವದಕ್ಕೆ ಹೋಗಲು ಆತನು ನ್ಯಾಯಾಧೀಶನಿಗೆ ಬಹಳ ಸಂಮಾನ ಮಾಡಿದನು. ಮತ್ತು ಮೊದಲು ತನಗೆ ಬುದ್ಧಿ ಬರುವಂತೆ ನಿಷ್ಪಕ್ಷಪಾತತೆಯಿಂದ ನಡೆದುದಕ್ಕೆ ಕೃತಜ್ಞತೆಯನ್ನು ವ್ಯಕ್ತಗೊಳಿಸಿದನು. ಮತ್ತೆ ನ್ಯಾಯಾಧೀಶನನ್ನು ಕುರಿತು—ನಿಮ್ಮ ಸಂಗಡ ನಾನು ಆಗ ನಡೆದಂತೆ ನಡೆಯುವಂಥ ಮಗನು ನನಗೆ ಆದರೆ ಅವನನ್ನು ಕಿವಿಹಿಂಡಿ ದಾರಿಗೆ ತರುವಂಥ ಕರ್ತವ್ಯದಕ್ಷರಾದ ನಿಮ್ಮಂಥ ನಂಬಿಗೆಯ ನ್ಯಾಯಾಧೀಶರು ನನಗೆ ದೊರೆಯಲಿ ಎಂದು ದೇವರಿಗೆ ಬೇಡಿಕೊಳ್ಳುತ್ತೇನೆ ಎಂದುನುಡಿದನು.

---

ವಿಧೇಯತೆ,
ಮತ್ತು
ದೊಡ್ಡಸ್ತಿಕೆ.

## ೧೯ ಗ್ರ್ಯಾಂಡ್‌ಡ್ಯೂಕ್ ಆಲೆಕ್ಸಿಸ್.

ರಶಿಯದ ಸಮ್ರಾಜನ ಮಗನಾದ ಗ್ರ್ಯಾಂಡ್‌ಡ್ಯೂಕ್ ಆಲೆಕ್ಸಿಸನು ಒಂದು ಯುದ್ಧದ ಹಡಗದಲ್ಲಿ ಅಲ್ಲಿಯ ಕೆಲಸಗಳನ್ನು ಕಲಿಯುವುದಕ್ಕಾಗಿ ನಾವಿಕನಾಗಿ ( ಮಿಡ್‌ಶಿಪ್‌ಮ್ಯಾನ್ ) ನಿಯಮಿಸಲ್ಪಟ್ಟಿದ್ದನು. ಆ ಹಡಗು ಡೆನ್ಮಾರ್ಕದ ದಂಡೆಯ ಬಳಿಯಲ್ಲಿ ನೀರೊಳಗೆ ಮುಳುಗಿದ್ದ ಬಂಡೆಗಲ್ಲಿಗೆ ತಾಕಿ ಒಡೆಯಲು ನೌಕಾಧ್ಯಕ್ಷನು ಹಡಗಿನೊಳಗಿನ ಜನರಿಗೆಲ್ಲ ಪ್ರಾಣವನ್ನು ರಕ್ಷಿಸಿಕೊಳ್ಳುವುದಕ್ಕೆ ಅಪ್ಪಣೆಮಾಡಿದನು; ಮತ್ತು ಎಲ್ಲಕ್ಕೂ ಮೊದಲು ಹಡಗಿನಿಂದ ಇಳಿಸಿದ ಜಾಲಿಬೋಟಿನಲ್ಲಿ ಗ್ರ್ಯಾಂಡ್‌ಡ್ಯೂಕನು ಇಳಿದು ಅದರ ಮೇಲ್ವಿಚಾರಣೆ ಮಾಡಬೇಕೆಂದು ಅಪ್ಪಣೆಮಾಡಿದನು. ಆದರೆ ಗ್ರ್ಯಾಂಡ್‌ಡ್ಯೂಕನು ತಾನು ಎಲ್ಲಕ್ಕೂ ಕೊನೆಯ ಜಾಲಿಬೋಟಿನಲ್ಲಿ ಇಳಿಯುವೆನೆಂದೂ, ತನ್ನ ಪ್ರಾಣರಕ್ಷಣೆಗಾಗಿ ಎಲ್ಲಕ್ಕೂ ಮೊದಲು ಓಡಿಹೋಗುವುದನ್ನು ಕಲಿಯಲೋಸುಗ ತಂದೆಯು ತನ್ನನ್ನು ಇಲ್ಲಿಗೆ ಕಳುಹಿಲ್ಲವೆಂದೂ ಹೇಳಿದನು. ತಾನು ಹೇಳಿದಂತೆಯೇ ಗ್ರ್ಯಾಂಡ್‌ಡ್ಯೂಕನು ಕೊನೆಯ ಜಾಲಿಬೋಟಿನಲ್ಲಿ ಇಳಿದನು. ಆದರೆ ಗ್ರ್ಯಾಂಡ್‌ಡ್ಯೂಕನು ದಂಡೆಗೆ ಬಂದ ಕೂಡಲೆ ನೌಕಾಧ್ಯಕ್ಷನು ತನ್ನ ಅಪ್ಪಣೆಯನ್ನು ಮನ್ನಿಸಲಿಲ್ಲವೆಂದು ಗ್ರ್ಯಾಂಡ್‌ಡ್ಯೂಕನಿಗೆ ಸೆರೆಮನೆಯ ಶಿಕ್ಷೆಯನ್ನು ವಿಧಿಸಿದನು. ಗ್ರ್ಯಾಂಡ್‌ಡ್ಯೂಕನು ಅದಕ್ಕೆ ಅಸಮಾಧಾನಪಡಲಿಲ್ಲ. ಬಾದಶಹನು ಈ ಸುದ್ದಿಯನ್ನು ಕೇಳಿ ನೌಕಾಧ್ಯಕ್ಷನಿಗೆ—“ ನಿಮ್ಮ ಅಪ್ಪಣೆಯನ್ನು ಮನ್ನಿಸದಿದ್ದುದಕ್ಕೆ ನೀವು ಮಿಡ್‌ಶಿಪ್‌ಮ್ಯಾನ್ ಅಲೆಕ್ಸಿಸನಿಗೆ ಶಿಕ್ಷೆಯನ್ನು ವಿಧಿಸಿರುವುದು ಬಹಳ ಯೋಗ್ಯವಾದುದೆಂದು ನಾನು ರಾಜನೆಂಬ ಸಂಬಂಧದಿಂದ ಅಭಿನಂದಿಸುತ್ತೇನೆ; ಆದರೆ ಮಗನು ತಾನು ಮೊದಲು ಓಡಿಹೋಗದೆ, ಪ್ರಾಣರಕ್ಷಣಕ್ಕಾಗಿ ಬಂದ ಸುಯೋಗವನ್ನು ಅಲಕ್ಷಿಸಿದನೆಂಬುದನ್ನು ನೋಡಿ ತಂದೆಯೆಂಬ ಸಂಬಂಧದಿಂದ ನಾನು ಆತನಿಗೆ ಮನಃಪೂರ್ವಕವಾಗಿ ಆಶೀರ್ವಾದ ಮಾಡುತ್ತೇನೆ ” ಎಂದು ಪತ್ರ ಬರೆದನು.

---

ಪ್ರಜಾಪಾಲನ.

## ೨೦ ಗವ್ಹರ್ನರ್ ಚ್ಯಾಂಗ್.

ಚೀನದೇಶದಲ್ಲಿ ಚ್ಯಾಂಗ್ ಎಂಬವನು ಉತ್ತಮ ಗವ್ಹರ್ನರನಾಗಿ ಹೋದು ದರಿಂದ ಈಗಲೂ ಪ್ರತಿಒಬ್ಬ ಚೀನೀಯ ಮನುಷ್ಯನ ಬಾಯೊಳಗೆ ಆತನ ಹೆಸರು ಇರುವುದು. ಆತನು ಅಧಿಕಾರಾರೂಢನಾದ ಕೂಡಲೆ ತನ್ನ ಕೈಕೆಳಗಿನ ಎಲ್ಲ ಮಂಡಾರೀನರೆಂಬ ಅಧಿಕಾರಿಗಳನ್ನು ಕರೆಯಿಸಿ—ಇನ್ನು ದೇಶದಲ್ಲಿ ಯಾವ ಕಡೆಗೂ ಸ್ವಲ್ಪವೂ ದಬ್ಬಾಳಿಕೆಯು ನಡೆಯಕೂಡದು ಎಂದು ವಿಜ್ಞಾಪಿಸಿದನು. ಆ ಬಳಿಕ ಒಬ್ಬ ಮಂಡಾರೀನನು ತನ್ನ ಪ್ರಾಂತದಲ್ಲಿ ಸಂಚರಿಸಿ ಇನ್ನುಮೇಲೆ ಯಾರೂ ಗವ್ಹರ್ನರರ ಕಡೆಗೆ ಅರ್ಜಿಯು ಕೊಡಲು ಹೋಗಬಾರದೆಂದೂ ಕೊಟ್ಟರೆ ಅದು ತನಗೆ ತಿಳಿದುಬರುವುದೆಂದೂ ಪ್ರಜೆಗಳಿಗೆ ತಿಳುಹಿದನು. ಇದರಿಂದ ಆ ಮಂಡಾರೀನನ ಪ್ರಾಂತದಲ್ಲಿ ಪ್ರಜೆಗಳ ಗೋಳು ಹೆಚ್ಚಿತಲ್ಲದೆ ಕುಂದಲಿಲ್ಲ.

ಒಂದಾನೊಂದುದಿನ ಚ್ಯಾಂಗ್ ಗವ್ಹರ್ನರನು ಸಾಮಾನ್ಯವೇಷವನ್ನು ಧರಿಸಿಕೊಂಡು ಈ ಮಂಡಾರೀನನ ಪ್ರಾಂತಕ್ಕೆ ಹೋಗಿ ಮಂಡಾರೀನನನ್ನು ಕಂಡು—ನಡೆ, ಈ ದಿವಸ ಪ್ರಜೆಗಳ ಕಷ್ಟಗಳನ್ನು ನೋಡಿಕೊಂಡು ಬರುವ; ನಾನು ಇಲ್ಲಿಗೆ ಬಂದಿರುವುದನ್ನು ಯಾರೂ ಅರಿಯರು; ನೀನೂ ವೇಷವನ್ನು ಬದಲಿಸಿಕೊಂಡು ಬಾ ಎಂದು ಹೇಳಿದನು. ಮಂಡಾರೀನನು ಅನಿರ್ವಾಹ ವೇಷಾಂತರದಿಂದ ಗವ್ಹರ್ನರನ ಸಂಗಡ ನಡೆದನು. ಇಬ್ಬರೂ ಕೂಡಿ ಒಂದು ಉಪಾಹಾರಗೃಹವನ್ನು ಹೊಕ್ಕರು. ಚಹವನ್ನು ಕುಡಿಯುತ್ತ ಕುಡಿಯುತ್ತ ಗವ್ಹರ್ನರನು ಹೋಟೆಲಿನ ಮ್ಯಾನೇಜರನನ್ನು ಕುರಿತು—ನಾವು ದೂರದೇಶದ ವರು; ನನಗೆ ಇಲ್ಲಿ ಕೆಲವು ಹಣವು ಬರತಕ್ಕದದೆ; ತೀವ್ರ ಮರಳಿ ಹೋಗ ಬೇಕಾಗಿದೆ; ಇಲ್ಲಿಯ ಮಂಡಾರೀನನು ನ್ಯಾಯವಿಚಾರಣೆಯನ್ನು ಶೀಘ್ರವಾಗಿ ಮುಗಿಸುವನೇ ಎಂದು ಕೇಳಿದನು. ಮ್ಯಾನೇಜರನು ಅತ್ತಿತ್ತ ನೋಡಿ ಮೆಲ್ಲನೆ- ಅಯ್ಯಾ, ಅರ್ಧದಷ್ಟು ಇಲ್ಲವೆ ಮುಕ್ಕಾಲಿನಷ್ಟು ಬಿಟ್ಟರೂ ಚಿಂತೆಯಿಲ್ಲ. ಉಳಿ ದುದನ್ನು ತೆಗೆದುಕೊಂಡು ರಾಜಿಯಾಗಿ ಹೋಗುವುದು ಒಳ್ಳೆಯದು; ದಾವೆ ಯನ್ನು ಮಾಡಿದರೆ ಮಂಡಾರೀನನು ನಿಮಗೆ ಎಡತಾಕ ಹಚ್ಚುವನು; ನಿಮ್ಮ ಹಣವು ವ್ಯರ್ಥವಾಗಿ ವೆಚ್ಚವಾಗುವುದಲ್ಲದೆ ಕೊನೆಗೆ ತಾನು ಅರ್ಧದಷ್ಟು ಲಂಚ ವನ್ನು ತೆಗೆದುಕೊಂಡು ನಿಮ್ಮ ದಾವೆಯನ್ನು 'ಡಿಸ್‌ಮಿಸ್' ಮಾಡಿ ಬಿಡುವನು

ಎಂದು ಹೇಳಿದನು. ಮಂಡಾರೀನನು ಮ್ಯಾನೇಜರನಿಗೆ ಗವ್ಹರ್ನರನ ಎದುರಿಗೆ ಏನನ್ನೂ ಮಾಡಲಾರದೆ ಅಂಗಾಲಿನಿಂದ ನಡುನೆತ್ತಿಯವರೆಗೆ ಸಂತಾಪದಿಂದ ಉರಿಯುಹತ್ತಿದನು; ಬಳಿಕ ಅಲ್ಲಿಂದ ಹೊರಗೆ ಬಂದು ಗವ್ಹರ್ನರನು ಮತ್ತೆ ಕೆಲ ಜನ ಸದ್ಗೃಹಸ್ಥರನ್ನು ಕರೆಕರೆದು ಕೇಳಲು ಎಲ್ಲರೂ ಮಂಡಾರೀನನನ್ನು ಹೊಗಳಿದರು. ಏಕೆಂದರೆ, ರಾಜಮಾರ್ಗದಲ್ಲಿ ಬಹಿರಂಗವಾಗಿ ಮಂಡಾರೀನನ ವಿರುದ್ಧವಾಗಿ ಹೇಳುವುದು ಸಂಕಟವೇ ಸರಿ. ಅವರಲ್ಲಿ ಕೆಲವರಿಗೆ ಮಂಡಾರೀನನ ಗುರುತೂ ಹತ್ತಿತ್ತು. ಎಲ್ಲಕ್ಕೂ ಗವ್ಹರ್ನರನು ಸಂತೋಷವನ್ನು ತೋರ್ಪಡಿಸಿ ಮಂಡಾರೀನನ ಆತಿಥ್ಯವನ್ನು ಸ್ವೀಕರಿಸಲೊಪ್ಪದೆ ತಾನು ಇಳಿದಲ್ಲಿಗೆ ಹೊರಟು ಹೋದನು. ಕೆಲವು ಮೈಲು ಹೋದಬಳಿಕ ಗವ್ಹರ್ನರನು ಮತ್ತೆ ವೇಷವನ್ನು ಬದಲಿಸಿಕೊಂಡು ಆ ಉಪಾಹಾರಗೃಹಕ್ಕೇ ಬಂದು ರಾತ್ರಿ ಅಲ್ಲಿಯೇ ಇಳಿದುಕೊಂಡನು. ಕೆಲಹೊತ್ತಾದ ಬಳಿಕ ಮಂಡಾರೀನನ ಸೇವಕರು ಅಲ್ಲಿಗೆ ಬಂದು ಹೋಟಲಿನ ಮ್ಯಾನೇಜರನನ್ನೂ ಅವನ ಜನರನ್ನೂ ಹಿಡಿದು ಹೆಡಮುಡಿಕಟ್ಟಿ ಎಳೆದುಕೊಂಡು ನಡೆದರು. ಚ್ಯಾಂಗ್ ಗವ್ಹರ್ನರನನ್ನೂ ಆ ಹೋಟಲಿನ ಜನರೊಡನೆ ಹಿಡಿದು ಒಯ್ದಿದ್ದರು. ಆ ಸೇವಕರು ಎಲ್ಲರನ್ನೂ ಮಂಡಾರೀನನ ಮುಂದೆ ನಿಲ್ಲಿಸಿದರು. ಎಲ್ಲರೂ ಮಂಡಾರೀನನ ಎದುರಿಗೆ ಮೊಳಕಾಲೂರಿ ತಲೆವಾಗಿಸಿ ಕುಳಿತುಕೊಂಡರು. ಮಂಡಾರೀನನು ಪ್ರತಿಒಬ್ಬನಿಗೂ ದಂಡವನ್ನೂ, ವೇತ್ರಾಘಾತ ( ಪಟಿಕೆ ) ಶಿಕ್ಷೆಯನ್ನೂ ವಿಧಿಸಿದನು. ಗವ್ಹರ್ನರನ ಮೋರೆಯ ಮೇಲೆ ಟೊಪ್ಪಿಗೆಯು ಮುಂದಕ್ಕೆ ಸರಿದು ಬಂದುದರಿಂದ ಮಂಡಾರೀನನು ಒದೆದು ಟೊಪ್ಪಿಗೆಯನ್ನು ಕೆಡವಿದನು. ಆವಾಗ ಗವ್ಹರ್ನರ್ ಚ್ಯಾಂಗನ ಗುರುತು ಸಿಕ್ಕಿತು. ಕೂಡಲೆ ಮಂಡಾರೀನನು ಅಂಜಿ ಬೆಪ್ಪಾಗಿ ಸುಮ್ಮನೆ ನಿಂತುಬಿಟ್ಟನು. ಮೊದಲಿನ ಆರ್ಭಟವೆಲ್ಲ ಕ್ಷಣದಲ್ಲಿ ಅಡಗಿ ಹೋಯಿತು. ಚ್ಯಾಂಗ್ ಗವ್ಹರ್ನರನು ಕೂಡಲೆ ಆತನನ್ನು ಕೆಲಸದಿಂದ ಬಿಡುಗಡೆಮಾಡಿ ಆತನ ಸ್ಥಳಕ್ಕೆ ಇನ್ನೊಬ್ಬ ಯೋಗ್ಯ ಮಂಡಾರೀನನನ್ನು ನಿಯಮಿಸಿದನು. ಮುಂದೆ ಆತನ ಹಿಂದಿನ ಎಲ್ಲ ಅಪರಾಧಗಳ ವಿಚಾರಣೆಯನ್ನು ನಡೆಸಿ ಸಾಕ್ಷಿಗಳ ಆಧಾರದಿಂದ ಆತನಿಗೆ ಯೋಗ್ಯವಾದ ಶಿಕ್ಷೆಯನ್ನು ವಿಧಿಸಿದನು.

---

ತಪ್ಪನ್ನು ಒಪ್ಪಿಕೊಳ್ಳುವದು.

## ೨೧ ಜಾರ್ಜ್‌ವಾಶಿಂಗ್ಟನ್.

ಅಮೇರಿಕೆಯಲ್ಲಿ ಒಮ್ಮೆ ಒಂದು ಕಡೆಗೆ ಪ್ರತಿನಿಧಿಯನ್ನು ಆರಿಸುವ ಕೆಲಸವು ನಡೆದಿತ್ತು. ಆಗ ಇಂಗ್ಲಿಷರ ವಶದಲ್ಲಿರುವ ರಾಜ್ಯದ ರೆಜಿಮೆಂಟಿನ ಕರ್ನಲನಾಗಿದ್ದ ಜಾರ್ಜ್‌ವಾಶಿಂಗ್ಟನ್ ಮಹಾಶಯನು ಆ ಸ್ಥಳದಲ್ಲಿದ್ದನು. ಮಾತಿಗೆ ಮಾತು ನಡೆಯಲು ಕೋಪಗೊಂಡ ವಾಶಿಂಗ್ಟನನು ಪೇಇನ್ ಎಂಬ ಗೃಹಸ್ಥನಿಗೆ ಬಿರುನುಡಿಗಳನ್ನಾಡಿದನು. ಮಿ. ಪೇಇನನು ಕೂಡಲೆ ಕೈಯೊಳಗಿನ ಕೋಲಿನಿಂದ ಬಲವಾಗಿ ಹೊಡೆದು ವಾಶಿಂಗ್ಟನನನ್ನು ನೆಲಕ್ಕುರುಳಿಸಿದನು. ವಾಶಿಂಗ್ಟನನ ಕೈಕೆಳಗಿನ ಹಲವು ಜನ ಸೈನಿಕರು ಸಮೀಪದಲ್ಲಿದ್ದರು. ಅವರು ತಮ್ಮ ಕರ್ನಲ್ ಸಾಹೇಬರಿಗೆ ಆದ ದುರವಸ್ಥೆಯನ್ನೂ ಅಪಮಾನವನ್ನೂ ಕಂಡು ಪೇಇನ್ ಸಾಹೇಬನ ಮೇಲೆ ಸಿಟ್ಟಿನಿಂದ ಏರಿ ಹೋಗಲು ಮಹಾತ್ಮನಾದ ವಾಶಿಂಗ್ಟನನು ಅವರಿಗೆ ಬೇಡವೆಂದು ಹೇಳಿ ಶಿಬಿರಕ್ಕೆ ಹೋಗಲಪ್ಪಣೆಕೊಟ್ಟನು.

ಮರುದಿನ ಮಹಾತ್ಮನಾದ ವಾಶಿಂಗ್ಟನನು ಮಿ. ಪೇಇನನಿಗೆ—ನೀವು ದಯಮಾಡಿ ಈ ಓಣಿಯಲ್ಲಿರುವ ಹೋಟೆಲಿನಲ್ಲಿ ಈ ಹೊತ್ತಿಗೆ ನನ್ನನ್ನು ಕಾಣಬೇಕು, ಎಂದು ಪತ್ರ ಬರೆದನು. ವಾಶಿಂಗ್ಟನನು ತನ್ನನ್ನು ಜಗಳಕ್ಕಾಗಿ ಕರೆದಿರುವನೆಂದು ಮಿ. ಪೇಇನನು ಭಾವಿಸಿದನು. ಆದರೆ ಪೇಇನನು ಆ ಹೋಟೆಲಿಗೆ ಹೋಗಿ ನೋಡುತ್ತಾನೆ–ಒಂದು ಮೇಜಿನ ಮೇಲೆ ಎರಡು ಗ್ಲಾಸುಗಳೂ ಒಂದು ಸೀಸೆ ಪಾನಕವೂ ಇದ್ದುವಲ್ಲದೆ ಪಿಸ್ತೂಲು ಮೊದಲಾದ ಆಯುಧಗಳೇನೂ ಇರಲಿಲ್ಲ. ವಾಶಿಂಗ್ಟನನು ಪೇಇನನು ಬಂದೊಡನೆ ಎದ್ದುನಿಂತು ಮಂದಹಾಸದಿಂದ- ನಿನ್ನೆ ತಮಗೆ ಬಿರುನುಡಿಗಳನ್ನು ಆಡಿದುದಕ್ಕಾಗಿ ನನಗೆ ಪಶ್ಚಾತ್ತಾಪವಾಗಿದೆ, ಮತ್ತು ನೀವು ಅದಕ್ಕಾಗಿ ನಿನ್ನೆ ಕೆಲಮಟ್ಟಿಗೆ ಮುಯ್ಯವನ್ನೂ ತೀರಿಸಿಕೊಂಡಿರುವಿರಿ. ಅಷ್ಟು ಸಾಕೆಂದು ನಿಮಗೆ ತೋರಿದ್ದರೆ ಇತ್ತ ಬನ್ನಿರಿ, (ಕೈಯನ್ನು ಮುಂದೆ ಚಾಚಿ) ನಾವು ಗೆಳೆಯರಾದೆವು ಎಂದು ನುಡಿದನು. ಈ ತರದ ಸೌಜನ್ಯದಿಂದ ಯಾವನಲ್ಲಿಯೂ ಸಿಟ್ಟು ಉಳಿಯಲಾರದು. ಮಿ. ಪೇಇನನು ಆನಂದದಿಂದ ವಾಶಿಂಗ್ಟನನ ಕರಮರ್ದನ ಮಾಡಿ ಮನಸ್ಸಿನ ಕಲ್ಮಷವನ್ನು ಬಿಟ್ಟುದಲ್ಲದೆ ಅಂದಿನಿಂದ ಕೊನೆಯುವರೆಗೆ ಮಹಾತ್ಮನಾದ ಜಾರ್ಜ್‌ವಾಶಿಂಗ್ಟನನ ಅನುಯಾಯಿಗಳಲ್ಲೊಬ್ಬನಾದನು.

---

ಪಿತೃಭಕ್ತಿ.

## ೨೨ ಅಸ್ಕಾಲನದ ರತ್ನ ವ್ಯಾಪಾರಿ.

ಒಂದಾನೊಂದು ಸಮಯದಲ್ಲಿ ಜೆರೂಸಲೇಮ ಪಟ್ಟಣದ ಪ್ರಾರ್ಥನಾಲಯದ ಧರ್ಮೋಪದೇಶಕನ ರತ್ನಹಾರದೊಳಗಿನ ಒಂದು ದೊಡ್ಡ ರತ್ನವು ಉದುರಿ ಬಿದ್ದು ಎಲ್ಲಿಯೋ ಕಳೆದು ಹೋಗಲು ಅಂತಹ ರತ್ನವೊಂದು ಬೇಕಾಯಿತು. ವಿಶೇಷ ಪ್ರಕಾರದ ಉತ್ಸವಗಳಲ್ಲಿ ಈ ರತ್ನಹಾರವನ್ನು ಧರಿಸಿಕೊಂಡು ಧರ್ಮೋಪದೇಶಕನು ಧರ್ಮೋಪದೇಶ ಮಾಡಬೇಕಾದ ನಿಯಮವಿದ್ದುದರಿಂದ ಅಂತಹ ರತ್ನವನ್ನು ಹುಡುಕಿ ಕೊಂಡುಕೊಂಡು ಸಮೀಪಿಸಿದ ಉತ್ಸವದ ಮುನ್ನದಿನವೇ ಬರಬೇಕೆಂದು ಅಪ್ಪಣೆಮಾಡಿ ಪ್ರಾರ್ಥನಾಲಯದ ಒಬ್ಬ ಕಾಮದಾರನನ್ನು ಕಳುಹಿದರು. ಎಲ್ಲಿ ಹುಡುಕಿದರೂ ಆ ಕಾಮದಾರನಿಗೆ ಆ ಅಳತೆಯ ರತ್ನವು ದೊರೆಯಲಿಲ್ಲ. ಕೊನೆಗೆ ಅಸ್ಕಾಲನದ ಒಬ್ಬ ರತ್ನ ವ್ಯಾಪಾರಿಯ ಬಳಿಯಲ್ಲಿ ಅದೇ ಅಳತೆಯ ರತ್ನವಿದೆಯೆಂದೂ, ಆತನು ಬಹಳ ಬೆಲೆಯನ್ನು ಹೇಳುತ್ತಿರುವುದರಿಂದ ಈ ವರೆಗೆ ಮಾರಾಟವಾಗದೆ ಉಳಿದಿದೆಯೆಂದೂ ಸುದ್ದಿ ಬಂತು. ಕಾಮದಾರನು ಆ ದಿವಸ ಸಂಜೆಗೇ ಆವೂರಿಗೆ ಹೋದನು. ಹೇಳಿದ ಬೆಲೆಯನ್ನು ಕೊಡಲೊಪ್ಪಿದುದರಿಂದ ರತ್ನ ವ್ಯಾಪಾರಿಯು ಮನೆಯ ಅಟ್ಟದ ಮೇಲೆ ಇಟ್ಟ ರತ್ನವನ್ನು ತರಲೋಸುಗ ಮೇಲೆ ಹೋದನು. ಆ ರತ್ನವು ಅಲ್ಲಿ ಮಲಗಿದ್ದ ಆ ವ್ಯಾಪಾರಿಯ ತಂದೆಯ ತಲೆದಿಂಬಿನ ಕೆಳಗೆ ಒಂದು ಡಬ್ಬಿಯಲ್ಲಿತ್ತು. ಆ ದಿವಸ ಆ ವ್ಯಾಪಾರಿಯ ತಂದೆಯ ಪ್ರಕೃತಿಯು ಸ್ವಸ್ಥವಾಗಿರಲಿಲ್ಲ. ರತ್ನ ವ್ಯಾಪಾರಿಯು ಆಗ ತನ್ನ ತಂದೆಗೆ ನಿದ್ದೆಹತ್ತಿರುವುದನ್ನು ಕಂಡು ಮೆಲ್ಲಮೆಲ್ಲನೆ ಕೆಳಗಿಳಿದು ಬಂದು ಈ ದಿವಸ ಆ ರತ್ನವನ್ನು ಕೊಡುವುದಕ್ಕಾಗುವುದಿಲ್ಲವೆಂದೂ ನಾಳೆ ಕೊಡುವೆನೆಂದೂ ಹೇಳಲು, ರತ್ನವ್ಯಾಪಾರಿಯು ಬೆಲೆಯನ್ನು ಹೆಚ್ಚಿಸುವುದಕ್ಕೆ ಹೀಗೆ ಮಾಡುತ್ತಾನೆಂದು ಆ ಕಾಮದಾರನಿಗೆ ತೋರಿತು. ಆಗ ಉತ್ಸವದಿನವು ತೀರ ಸಮೀಪಿಸಿದುದರಿಂದ ಈಗಲೇ ಕೊಟ್ಟರೆ ಇಮ್ಮಡಿ ಬೆಲೆಕೊಡುವೆನೆಂದು ಆ ಕಾಮದಾರನು ಹೇಳಿದನು. ಆಗ ರತ್ನವ್ಯಾಪಾರಿಯು ಮತ್ತೆ ಅಟ್ಟದ ಮೇಲೆ ಹೋಗಿ ತಲೆದಿಂಬಿನ ಕೆಳಗೆ ಮೆಲ್ಲನೆ ಕೈ ನೀಡಿದನು. ಆದರೆ ತಂದೆಯು ಮಗ್ಗುಲಾಗಿ ಹೊರಳಿದುದರಿಂದ ರತ್ನವ್ಯಾಪಾರಿಯು ತನ್ನ ಕೈಯನ್ನಷ್ಟೇ ಮೆಲ್ಲನೆ ಹೊರಗೆ ಎಳೆದುಕೊಳ್ಳುವುದಕ್ಕೇ ಬಹಳ ಎಚ್ಚರಪಡಬೇಕಾಯಿತು. ಮತ್ತು ತಂದೆಗೆ ನಿದ್ರಾಭಂಗ

ವಾಗದಂತೆ ಆ ಡಬ್ಬಿಯನ್ನು ತೆಗೆದುಕೊಳ್ಳುವುದು ಶಕ್ಯವಿಲ್ಲವೆಂದು ಆತನಿಗೆ ಕಂಡುಬಂದಿತು. ಆಗ ಆತನು ಕೆಳಗೆ ಬಂದು ನಾನು ದುಡ್ಡಿನ ಆಶೆಗಾಗಿ ಅಸ್ವಸ್ಥನಾಗಿದ್ದ ತಂದೆಯ ನಿದ್ದೆಯನ್ನು ಕೆಡಿಸಲಾರೆನೆಂದೂ, ಆದುದರಿಂದ ಈ ದಿವಸ ಖಂಡಿತವಾಗಿ ರತ್ನವು ದೊರೆಯಲಾರದೆಂದೂ ಆ ಕಾಮದಾರನಿಗೆ ಹೇಳಿದನು. ಕೊನೆಗೆ ನಿರುಪಾಯನಾಗಿ ಆ ಕಾಮದಾರನು ಮರಳಿ ಜೆರೂಸಲೇಮಕ್ಕೆ ಹೋಗಿ ನಡೆದ ಸಮಾಚಾರವನ್ನು ಹೇಳಲು ಧರ್ಮೋಪದೇಶಕನು "ನನ್ನ ರತ್ನಹಾರದಲ್ಲಿ ತೆರವು ಬಿದ್ದ ಸ್ಥಳದಲ್ಲಿ ಈಗ ಆ ರತ್ನವ್ಯಾಪಾರಿಯ ಅಸಾಧಾರಣ ಪಿತೃಭಕ್ತಿಯೆಂಬ ಉಜ್ವಲ ರತ್ನವು ಸಮಸ್ತ ಪಾರ್ಥಿವ ರತ್ನಗಳಿಗಿಂತ ಹೆಚ್ಚಿಗೆ ಬೆಳಗುತ್ತಿದೆ" ಎಂದು ಹೇಳಿದನು.

---

ಚೆನ್ನೆಯೂ ಚೆನ್ನನೂ.

## ೨೩ ನಿಷ್ಕಾಮಭಕ್ತಿ.

ಚೆನ್ನನೂ ಚೆನ್ನೆಯೂ ಗಂಡಹೆಂಡಿರು. ಅಡವಿಯಿಂದ ಕಟ್ಟಿಗೆ ಹೊರೆಗಳನ್ನು ತಂದು ಮಾರಿ ಉಪಜೀವಿಸುವರು. ಒಂದುದಿನ ನಾರದನು ಶಂಕರನನ್ನು ಕುರಿತು—ದೇವಾ, ಏನನ್ನಾದರೂ ಕೊಟ್ಟು ಈ ಸಜ್ಜನರ ದುಃಖವನ್ನು ದೂರ ಮಾಡಬಾರದೇ ಎಂದು ಬಿನ್ನಯಿಸಿದನು. ಸ್ವಾಮಿಯು—ನಕ್ಕು, ಅವರು ಏನನ್ನೂ ತೆಗೆದುಕೊಳ್ಳುವುದಿಲ್ಲ; ಅವರಿಗೆ ಹೇಗೆ ಕೊಡುವುದು ಎಂದು ಕೇಳಿದನು. ನಾರದನು ಅದು ಹೇಗೆ, ಪರೀಕ್ಷಿಸದೆ ಹೇಗೆ ಹೇಳುವುದು ಎಂದು ನುಡಿದನು. ಆಗ ಶಂಕರನು ಆಗಲಿ ಎಂದು ಹೇಳಿ ಅವರ ದಾರಿಯಲ್ಲಿ ಒಂದು ಹೊನ್ನನ್ನಿರಿಸಿದನು. ಚೆನ್ನನು ಮುಂದೆ ಹೋಗುತ್ತಿದ್ದನು. ಆತನು ಆ ಹೊನ್ನನ್ನು ಕಂಡು, ಹೆಂಡತಿಗೆ ಅದರ ಮೇಲೆ ಲೋಭ ಹುಟ್ಟೀತೆಂದು ಬಗೆದು ಅದನ್ನು ಹುಡಿಯಿಂದ ಮುಚ್ಚಿ ಮುಂದೆ ನಡೆದನು. ಚೆನ್ನೆಯು ಅದೇನು ಮಾಡಿದಿರೆಂದು ಗಂಡನನ್ನು ಕೇಳಲು ಆತನು ಎಲ್ಲವನ್ನೂ ಹೇಳಿದನು. ಆಗ ಚೆನ್ನೆಯು—ಇದೇನು, ನೀವು ಹೊನ್ನೂ ಹುಡಿಯೂ ಬೇರೆ ಬೇರೆಯೆಂದು ತಿಳಿಯುವಿರಾ? ಆ ಭೇದಬುದ್ಧಿಯು ಇನ್ನೂ ಅಳಿದು ಹೋಗಿಲ್ಲವೇ ಎಂದು ಕೇಳಿದಳು. ಆಗ ಚೆನ್ನನು ಸಂತುಷ್ಟನಾಗಿ ಪ್ರಿಯಳೇ, 'ನೀನು ನಿಜವಾಗಿ ಚೆನ್ನೆಯು' (ಸುಂದರಿಯು) ಎಂದು ಅಭಿನಂದಿಸಿದನು. (ಪರಮೇಶ್ವರನು ಸೌಂದರ್ಯದ ಖನಿಯು.)

ಇದನ್ನು ನೋಡಿ ನಾರದನು—ಇವರು ದುಡ್ಡನ್ನು ಮುಟ್ಟಲಾರರೆಂದು ತಿಳಿದು ಅವರ ದಾರಿಯಲ್ಲಿ ಕಟ್ಟಿಗೆಗಳ ಗುಂಪಿಯನ್ನು ಹಾಕುವ, ಅದರಿಂದ ಅವರ ಇಂದಿನ ಕಷ್ಟವಾದರೂ ಕಡಿಮೆಯಾದೀತು ಎಂದನು. ಶಂಕರನು—ಇದರಿಂದ ಲೂ ಪ್ರಯೋಜನವಾಗದೆಂದು ಹೇಳಿದನು. ಆದರೂ ನಾರದನು ಅವರ ದಾರಿ ಯಲ್ಲಿ ಒಂದು ಕಟ್ಟಿಗೆಯ ಗುಂಪಿಯನ್ನು ಹಾಕಿದನು. ಅವರು ಆ ಗುಂಪಿಯನ್ನೆ ನೋಡಿ, ಇಲ್ಲಿ ಯಾರೋ ಕಟ್ಟಿಗೆಯನ್ನು ಕೂಡ ಹಾಕಿರುವರು, ಎಂದು ಆ ಸ್ಥಳ ವನ್ನೇ ಬಿಟ್ಟು ಮತ್ತೊಂದೆಡೆಗೆ ಹೋದರು; ಆದಿನ ಎರಡು ಕಟ್ಟಿಗೆಗಳು ಒಂದರ ಮೇಲೊಂದು ಬಿದ್ದಿದ್ದರೂ ಅವನ್ನು ಎರಡನೆಯವರು ಕೂಡ ಹಾಕಿರಬಹು ದೆಂದು ಅವರು ಬಿಟ್ಟು ದೂರ ಹೋಗಹತ್ತಿದರು. ಇದರಿಂದ ಆ ದಿವಸ ಅವರ ಕಷ್ಟವು ಹೆಚ್ಚಿತಲ್ಲದೆ ಕಡಿಮೆಯಾಗಲಿಲ್ಲ. ಆಗ ನಾರದನು ದೇವಾ, ಅವರಿಗೆ ದರ್ಶನಕೊಟ್ಟು ಏನಾದರೂ ಸ್ವೀಕರಿಸ ಹೇಳು ಎಂದು ಬಿನ್ನಯಿಸಿದನು. ಶಂಕ ರನು ಹಾಗೆ ಮಾಡಿದನು. ಆಗ ಚೆನ್ನೆಯೂ ಚೆನ್ನನೂ ದೇವರ ಪಾದಗಳಿಗೆರಗಿ ಸ್ವಾಮೀ, ನಮಗೆ ನಿನ್ನ ಪಾದಗಳಲ್ಲಿ ನಿರ್ವ್ಯಾಜ ಭಕ್ತಿಯೊಂದನ್ನು ದೃಢಪಡಿಸು, ನಮಗೆ ಮತ್ತೆ ಏನೂ ಬೇಡ; ನಾವು ಅತ್ಯಂತ ಸುಖದಲ್ಲಿದ್ದೇವೆ ಎಂದು ಬಿನ್ನಯಿ ಸಿಕೊಂಡರು.

---

ವೇಳೆಯ ಮಹತ್ವ

## ೨೪ ಬೆಂಜಾಮಿನ್ ಫ್ರಾಂಕಲಿನ್.

ಅಮೇರಿಕದಲ್ಲಿ ಸುಪ್ರಸಿದ್ಧನಾಗಿದ್ದ ಬೆಂಜಾಮಿನ್ ಫ್ರಾಂಕಲಿನನು ಪುಸ್ತ ಕದ ಅಂಗಡಿಯನ್ನೂ, ಅದಕ್ಕೆ ಜೋಡಿಸಿ ಮುದ್ರಣಾಲಯವನ್ನೂ ಇಟ್ಟಿದ್ದನು. ಒಬ್ಬ ಗೃಹಸ್ಥನು ಒಂದು ದಿನ ಪುಸ್ತಕವನ್ನು ಕೊಂಡುಕೊಳ್ಳುವುದಕ್ಕೆ ಬಂದು ಆ ಪುಸ್ತಕವನ್ನೊಮ್ಮೆ ಈ ಪುಸ್ತಕವನ್ನೊಮ್ಮೆ ನೋಡಿ ಕೊನೆಗೆ ಒಂದು ಪುಸ್ತ ಕದ ಬೆಲೆಯನ್ನು ಕೇಳಿದನು. ಆಗ ಪುಸ್ತಕದ ಅಂಗಡಿಯಲ್ಲಿ ಒಬ್ಬ ನೌಕರನು ಇದ್ದನು. ಬೆಂಜಾಮಿನ್ ಫ್ರಾಂಕಲಿನನು ಮುದ್ರಣಾಲಯದಲ್ಲಿದ್ದನು. ನೌಕರನು ಪುಸ್ತಕದ ಬೆಲೆ ಒಂದು ಡಾಲರು ಎಂದು ಹೇಳಿದನು. ಗಿರಾಕಿಯು ಅಂಗಡಿಯ ಯಜಮಾನನನ್ನು ಕರೆ ಎಂದನು. ಕರೆದ ಕೂಡಲೆ ಫ್ರಾಂಕಲಿನನು ಬಂದು

ಗಿರಾಕಿಗೆ ವಿನಯದಿಂದ “ ಸಲಾಂ ” ಮಾಡಿದನು. ಗಿರಾಕಿಯು ಆ ಪುಸ್ತಕದ ಬೆಲೆಯನ್ನು ಕೇಳಲು ಫ್ರಾಂಕಲಿನನು ಒಂದೂಕಾಲು ಡಾಲರು ಎಂದು ಹೇಳಿದನು. ಗಿರಾಕಿಯು—ನಿಮ್ಮ ಆಳು ‘ ಒಂದು ಡಾಲರು ’ ಹೇಳಿರುವನು ಎಂದನು. ಫ್ರಾಂಕಲಿನನು—ಅಹುದು, ಆಗ ಆ ಬೆಲೆಯಲ್ಲಿಯೇ ನಮಗೆ ಲಾಭವುಳಿಯುತ್ತಿತ್ತು ಎಂದನು. ಗಿರಾಕಿಯು—ಈಗ ಎಷ್ಟಕ್ಕೆ ಕೊಡುವಿರೆಂಬುದನ್ನು ಖಂಡಿತವಾಗಿ ಹೇಳಿರಿ ಎಂದನು. ಫ್ರಾಂಕಲಿನನು ನಗುವೋರೆಯಿಂದ ಮತ್ತು ವಿನಯದಿಂದ “ ಈಗ ಒಂದುವರೆ ಡಾಲರು ” ಎಂದನು. ನಾನು ಕೈಯಲ್ಲಿಯ ಕೆಲಸವನ್ನು ಬಿಟ್ಟು ಇಲ್ಲಿ ಇದು ವರೆಗೆ ನಿಲ್ಲಬೇಕಾದುದರಿಂದ ಆದರ ಬೆಲೆಯು ಕಾಲು ಡಾಲರು ಏರಿತು ಎಂದನು. ಗಿರಾಕಿಯು ತಾನು ವ್ಯರ್ಥವಾಗಿ ವೇಳೆಯನ್ನು ಕಳೆದುದರಿಂದ ಫ್ರಾಂಕಲಿನನು ವೇಳೆಯ ಬೆಲೆಯನ್ನು ಹಿಡಿದು ಪುಸ್ತಕದ ಬೆಲೆಯನ್ನು ಹೆಚ್ಚಿಸುತ್ತಿರುವನೆಂದರಿತು ನಾಚಿ ಒಂದುವರೆ ಡಾಲರನ್ನು ಕೊಟ್ಟೀ ಆ ಪುಸ್ತಕವನ್ನು ತೆಗೆದುಕೊಂಡು ಹೋದನು.

ನಮ್ಮ ದೇಶದಲ್ಲಿ ಬಹು ಜನರು ವೇಳೆಯ ಬೆಲೆಯನ್ನರಿಯರು. ಉದ್ದರಿಯ ಲೆಕ್ಕವನ್ನಿಡುವುದಕ್ಕೂ, ಉದ್ದರಿಯ ‘ ವಸೂಲಿ ’ ಗೂ ನೌಕರರನ್ನು ನಮ್ಮಲ್ಲಿ ಇಟ್ಟುಕೊಳ್ಳಲೇಬೇಕಾಗುವುದು. ಎಡತಾಕಿಸದೆ ಹಣವನ್ನು ಕೊಡುವವರು ವಿರಳ. ಇದರಲ್ಲಿ ತಮ್ಮ ಹಾನಿಯೇ ಉಂಟೆಂಬುದನ್ನು ಗಿರಾಕಿಗಳು ತಿಳಿಯುವುದಿಲ್ಲ. ಪ್ರತಿ ಒಂದು ವ್ಯವಹಾರದಲ್ಲಿ ನಮ್ಮವರು ವೇಳೆಯ ಅಪವ್ಯಯ ಮಾಡುತ್ತಾರೆ.

ಎರಡನೆಯವರ ವೇಳೆಗೂ ಬೆಲೆಯುಂಟೆಂಬುದನ್ನು ಹಲವರು ಮರೆಯುತ್ತಾರೆ. ನಮ್ಮ ದೇಶದ ದಾರಿದ್ರ್ಯದ ಹಲವು ಕಾರಣಗಳಲ್ಲಿ ವೇಳೆಯ ಅಪವ್ಯಯವೂ ಒಂದು ಕಾರಣವು.

---

ಯಾರ ತ್ಯಾಗವು ಹೆಚ್ಚಿನದು ?

## ೨೫. ಸಂನ್ಯಾಸಿಯ ನುಡಿ.

ಬಂಕಾಪುರದ ಗೋವಿಂದಶಾಸ್ತ್ರಿಗಳು ಶಾಸ್ತ್ರಾಧ್ಯಯನ ಮಾಡಿ ಸುಶೀಲರಾಗಿದ್ದರು. ಆದರೆ ನಿರಂತರ ಹೊಲಮನೆ, ದುಡ್ಡುಕಾಸು ಮೊದಲಾದ ಸಾಂಸಾರಿಕ ವಿಚಾರಗಳಲ್ಲಿಯೇ ಯಾವಾಗಲೂ ತೊಡಗಿರುತ್ತಿದ್ದರು. ಒಂದಾನೊಂದು ದಿವಸ ಅವರ ಮನೆಗೆ ತೇಜಸ್ವಿಯಾದ ಒಬ್ಬ ಸಂನ್ಯಾಸಿಯು ಬಂದನು. ಆತನ ವೈರಾಗ್ಯವನ್ನು ಕಂಡು ಗೋವಿಂದಶಾಸ್ತ್ರಿಯ ಮನದಲ್ಲಿಯೂ ಒಂದು ವೈರಾಗ್ಯದ ಲಹರಿಯು ಬರಲು ಆತನು ಸಂನ್ಯಾಸಿಗೆ—ಸ್ವಾಮೀ, ತಮ್ಮ ತ್ಯಾಗವು ಹೆಚ್ಚಿನದು, ತಾವು ಧನ್ಯರು. ನಾವು ಕೊಳೆಪಾಟದಲ್ಲಿ ತೊಳಲಾಡುತ್ತಿದ್ದೇವೆ ಎಂದನು.

ಆಗ ಸಂನ್ಯಾಸಿಯು—ಶಾಸ್ತ್ರಿಗಳೇ, ಅಜ್ಞಜನರು ನಮ್ಮನ್ನು ತ್ಯಾಗಿಗಳೆಂದು ಹೇಳಬಹುದು; ತಾವು ಶಾಸ್ತ್ರಾಧ್ಯಯನ ಮಾಡಿದವರು; ಬಲ್ಲವರು. ಹೀಗೆ ಹೇಳಬೇಕೇ? ನೋಡಿರಿ, ನಾನು, ಆ ಅಮೌಲ್ಯವಾದ ನಿತ್ಯಧನದ ಪ್ರಾಪ್ತಿಗಾಗಿ ಈ ನಶ್ವರವಾದ ಮನೆಮಾರುಗಳನ್ನು ತೊರೆದಿದ್ದೇನೆ. ನೀವಾದರೋ ಆ ಅಮೌಲ್ಯನಿತ್ಯಧನದ ಮಹತ್ವವನ್ನು ಅರಿತಿದ್ದರೂ ಅದನ್ನು ತ್ಯಾಗಮಾಡಿ ಈ ಅಲ್ಪ ಅನಿತ್ಯ ಧನವೆನಿಸಿದ ಹೊಲಮನೆಗಳಲ್ಲಿ ತೊಡಗಿಕೊಂಡಿರುತ್ತೀರಿ. ಆ ನಿತ್ಯೈಶ್ವರ್ಯವನ್ನು ಕುರಿತು ನಿಮ್ಮಲ್ಲಿ ಆಶೆಯೇ ಇಲ್ಲ, ಎಂದಬಳಿಕ ನನ್ನ ತ್ಯಾಗವು ಹೆಚ್ಚಿನದೋ ತಮ್ಮ ತ್ಯಾಗವು ಹೆಚ್ಚಿನದೋ ಹೇಳಿರಿ ಎಂದು ನುಡಿದನು. ಶಾಸ್ತ್ರಿಗಳನ್ನು ನಿದ್ದೆಯಿಂದ ಎಚ್ಚರಿಸಿದಂತಾಯಿತು.

---

ಕರ್ತವ್ಯಪಾಲನದಲ್ಲಿ ದೃಢತೆ.

## ೨೬. ನೆಲ್ಸನ್.

ಹೊರೇಶಿಓ ನೆಲ್ಸನನು ೯ ವರ್ಷದವನಿದ್ದಾಗ ಒಮ್ಮೆ ಶಾಲೆಯ ರಜೆಯ ದಿನಗಳಲ್ಲಿ ಹಾಸ್ಟೆಲಿನಿಂದ ಹಳ್ಳಿಯಲ್ಲಿರುವ ತನ್ನ ಮನೆಗೆ ಬಂದು ತಂದೆಯ ಬಳಿಯಲ್ಲಿ ಕೆಲವು ದಿವಸ ಆನಂದದಲ್ಲಿದ್ದನು. ರಜೆಯು ಮುಗಿದ ಬಳಿಕ ಮಳೆಯಾದುದರಿಂದಲೂ, ಹಿಮವು ಬಿದ್ದುದರಿಂದಲೂ ಕೆಲವು ದಿವಸ ಶಾಲೆಗೆ ಮರಳಿ ಹೋಗುವುದಕ್ಕೆ ಶಕ್ಯವಾಗಲಿಲ್ಲವಾದುದರಿಂದ ಹುಡುಗನ ಹರ್ಷಕ್ಕೆ ಮಿತಿಯಿರಲಿಲ್ಲ. ಆಕಾಶವು ಸ್ವಚ್ಛವಾದ ಬಳಿಕ ತಂದೆಯು ಹೊರೇಶಿಓ ನೆಲ್ಸನನನ್ನೂ, ಅವನ ಅಣ್ಣನಾದ ವಿಲಿಯಮನನ್ನೂ ಒಂದೊಂದು ಕುದುರೆಯ ಮೇಲೆ ಕುಳ್ಳಿರಿಸಿ ಶಾಲೆಯಿದ್ದ ಊರಿಗೆ ಕಳುಹಿದನು. ಹೊರಡುವಾಗ ತಂದೆಯು—ತಮ್ಮಗಳಿರಾ, ದಾರಿಯು ಬಹಳ ಕೆಟ್ಟಿದೆ; ಮುಂದೆ ಸಾಗದಷ್ಟು ತೊಂದರೆಯೆನಿಸಿದರೆ ಮರಳಿ ಬಂದುಬಿಡಿರಿ ಎಂದು ಹೇಳಿದ್ದನು. ದಾರಿಯಲ್ಲಿ ನಿಜವಾಗಿಯೂ ಬಹಳ ತೊಂದರೆಯಿತ್ತು. ಮರಳಿ ಊರಿಗೆ ಹೋಗಿದ್ದರೆ ತಪ್ಪಾಗುತ್ತಿರಲಿಲ್ಲ. ವಿಲಿಯಮನು ನಡುನಡುವೆ ಮರಳಿ ಹೋಗುವ ಇಚ್ಛೆಯನ್ನು ತೋರ್ಪಡಿಸಿದನು. ಆದರೆ ನೆಲ್ಸನನು—ಅಣ್ಣಾ, ನೋಡು, ಅಪ್ಪನು ನಾವು ಪೈಗಳ್ಳರಲ್ಲವೆಂದೂ, ನಿಜವಾಗಿ ನಾವು ಶಾಲೆಗೆ ಹೋಗುವುದಕ್ಕೆ ಪೂರ್ಣಪ್ರಯತ್ನಮಾಡುವೆವೆಂದೂ ನಂಬಿ ನಮ್ಮನ್ನು ಕಳುಹಿಸಿರುವನು. ಆದುದರಿಂದ ನಾವು ಶಕ್ಯವಿದ್ದಮಟ್ಟಿಗೂ ಹೋಗುವುದಕ್ಕೆ ಪ್ರಯತ್ನಿಸುವ; ನೀನೇ ಹೇಳು—ಈ ತರದ ದಾರಿಯಿದ್ದರೂ ರಜೆಯ ಮೊದಲನೆಯ ದಿವಸ ಶಾಲೆಯಿಂದ ಮನೆಗೆ ಹೋಗುವುದಿದ್ದರೆ ಹಿಂದೆಮುಂದೆ ನೋಡುತ್ತಿದ್ದೆವೇ ಎಂದು ಕೇಳಿದನು.

ಬಾಲ್ಯದ ತೊಟ್ಟು ಈ ಮೇರೆಗೆ ಕರ್ತವ್ಯಪಾಲನ ಮಾಡಿದ ಹೊರೇಶಿಓ ನೆಲ್ಸನನು ಇಂಗ್ಲಂಡದ ಹಡಗುಪಡೆಯ ಮುಖ್ಯಾಧಿಪತಿ (ಅಡ್ಮಿರಲ್) ಆಗಿ ಟ್ರಾಫಲ್ಗಾರ್ ಯುದ್ಧದಲ್ಲಿ ಜಯವನ್ನು ಸಂಪಾದಿಸಿದ ದಿವಸ ಹಡಗಿನ ಮೇಲೆ ಈತನು ನಿಲ್ಲಿಸಿದ ಧ್ವಜದ ಪಟದ ಮೇಲೆ—" ಪ್ರತಿಒಬ್ಬನು ತನ್ನ ತನ್ನ ಕರ್ತವ್ಯವನ್ನು ಮನಃಪೂರ್ವಕವಾಗಿ ಮಾಡಬೇಕೆಂದು ಮಾತೃಭೂಮಿಯಾದ ಇಂಗ್ಲಂಡವು ಆಶಿಸುತ್ತದೆ." ಎಂದು ಬರೆದಿತ್ತು. ಆ ದಿನ ಪ್ರತಿಒಬ್ಬ ಸೈನಿಕನು ತನ್ನ ಕರ್ತವ್ಯವನ್ನು ಪಾಲಿಸಿ ಮಾತೃಭೂಮಿಗೆ ಈಗಿರುವ ಗೌರವವು ಬರುವುದಕ್ಕೆ ಕಾರಣವಾದನು.

---

ಸೌಶೀಲ್ಯ.

## ೨೭. ಸೇಖಸಾದಿ.

ಪರ್ಸಿಯಾ ದೇಶದ ಸುಪ್ರಸಿದ್ಧ ಕವಿ ಸೇಖಸಾದಿಯು ಶಿರಾಜಪಟ್ಟಣದಲ್ಲಿ (ಕ್ರಿ. ಶ. ೧೧೯೪) ಹುಟ್ಟಿದನು. ಬಗದಾದದಲ್ಲಿ ವಿದ್ಯಾಭ್ಯಾಸ ಮಾಡಿದನು. ಆತನು ಏಸಿಯದ ಪಶ್ಚಿಮಭಾಗ, ಆಫ್ರಿಕದ ಉತ್ತರಭಾಗ, ಹಿಂದುಸ್ಥಾನ ಇವುಗಳಲ್ಲೆಲ್ಲ ಸಂಚಾರಮಾಡಿ ಬಹಳ ನೋಡಿದವನೂ, ಬಹಳ ಕೇಳಿದವನೂ ಆಗಿದ್ದನು. ಆತನು ಜೆರೂಸಲೇಮಿನ ಬಳಿಯಲ್ಲಿರುವ ನಿರ್ಜನ ಪ್ರದೇಶದಲ್ಲಿ ಕಾಡಪಶುಗಳೊಡನೆ ಒಬ್ಬನೇ ಬಹುಕಾಲ ವಾಸಮಾಡಿದ್ದನು. ಅಲ್ಲಿ ಧರ್ಮಯುದ್ಧ (ಕ್ರುಸೆಡ್) ಗಳಿಗಾಗಿ ಬಂದ ಕ್ರಿಶ್ಚಿಯನ್ ಸೈನಿಕರು ಈತನನ್ನು ಸೆರೆ ಹಿಡಿದು ದಾಸನನ್ನಾಗಿ ಮಾಡಿ ಮಾರಿದ್ದರು. ಈತನ ಅಗಾಧಪಾಂಡಿತ್ಯವನ್ನೂ, ಪರಿಶುದ್ಧವಾದ ನಡೆವಳಿಯನ್ನೂ, ಆನಂದದ ಸ್ವಭಾವವನ್ನೂ ಕಂಡು ಒಬ್ಬ ಮುಸಲ್ಮಾನ ವ್ಯಾಪಾರಿಯು ೧೦ ಮೊಹರುಗಳನ್ನು ಕೊಟ್ಟು ಈತನನ್ನು ದಾಸ್ಯದಿಂದ ಬಿಡಿಸಿಕೊಂಡು ೧೦೦ ಮೊಹರುಗಳನ್ನು ವರದಕ್ಷಿಣೆಯಾಗಿ ಕೊಟ್ಟು ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಸಾದಿಯು ೧೦೨ ವರ್ಷ ಬದುಕಿದ್ದನು. ಮೂರರಲ್ಲೆರಡು ಪಾಲು ಆಯುಷ್ಯವನ್ನು ದೇಶಸಂಚಾರದಲ್ಲಿಯೂ, ಉಪಾಸನೆ (ನಿಮಾಜು) ಯಲ್ಲಿಯೂ ಕಳೆದನು. ಈತನ ಗುಲಿಸ್ತಾ, ಬುಸ್ತಾ ಎಂಬ ಎರಡು ಧರ್ಮ-ನೀತಿ ಬೋಧಕ ಗ್ರಂಥಗಳು ಈಗಲೂ ಮುಸಲ್ಮಾನರಿಗೆ ನೀತಿಸದಾಚಾರಗಳನ್ನುಂಟು ಮಾಡುವಲ್ಲಿ ಸಹಾಯಕಗಳಾಗಿವೆ.

ಸಾದಿಯು ಹೆಂಡತಿಯು ಕರ್ಕಶಳೂ, ಬಲು ಮಾತಿನವಳೂ ಆಗಿದ್ದಳು. ಆಕೆ ಮಾಡುವ ಅಪಮಾನವನ್ನೂ, ತೊಂದರೆಯನ್ನೂ ಸಾದಿಯು ಸುಮ್ಮನೆ ತಡೆದುಕೊಳ್ಳುವನು. ಒಮ್ಮೆ ಆಕೆಯು "ನನ್ನ ತಂದೆಯು ೧೦ ಮೊಹರುಗಳನ್ನು ಕೊಟ್ಟು ನಿಮ್ಮನ್ನು ದಾಸ್ಯದಿಂದ ಬಿಡುಗಡೆ ಮಾಡಿದನು" ಎಂದು ಮೂದಲಿಸಿದಳು. ಆಗ ಸಾದಿಯು ನಗುಮೋರೆಯಿಂದಲೇ—ಬಿಡುಗಡೆ ಮಾಡಲಿಲ್ಲ; ಮೊದಲಿಗಿಂತ ನೂರುಪಟ್ಟು ಕಠೋರನಾದ ಒಡೆಯನಿಗೆ ೧೦೦ ಮೊಹರುಗಳಿಗೆ ಮತ್ತೆ ಮಾರಿದನು ಎಂದು ಉತ್ತರಕೊಟ್ಟನು.

ಸಾದಿಯು ಯಾವ ಸ್ಥಿತಿಯಲ್ಲಿದ್ದರೂ ಸಂತುಷ್ಟನಾಗಿರುತ್ತಿದ್ದನು. ಒಂದಾನೊಂದು ಸಮಯದಲ್ಲಿ ಮೆಟ್ಟುಗಳನ್ನು ಕೊಳ್ಳುವುದಕ್ಕೆ ಗತಿಯಿಲ್ಲದೆ ಬರಿಗಾಲಿ

ನಿಂದ ಹೋಗುತ್ತಿರುವಾಗ ಎದುರಿಗೆ ಬರುತ್ತಿದ್ದ ಒಬ್ಬ ಕುಂಟನನ್ನು ಕಂಡು ದೇವರು ತನಗೆ ಮೆಟ್ಟುಗಳನ್ನು ಕೊಡದಿದ್ದರೂ ನಡೆದಾಡುವ ಶಕ್ತಿಯನ್ನು ದಯ ಪಾಲಿಸಿದುದಕ್ಕೆ ಸಂತೋಷವನ್ನು ಪ್ರಕಟಿಸಿದನು.

ಸಾದಿಯು ರೂಪವಂತನಲ್ಲ; ತಲೆಯ ಮೇಲಿನ ಕೂದಲು ಉದುರಿಹೋಗಿದ್ದುವು. ಒಂದಾನೊಂದು ದಿವಸ ಈತನು ಮಾಸಿದ ಬಟ್ಟೆಗಳನ್ನು ಧರಿಸಿಕೊಂಡು ಹೋಗುತ್ತಿರುವಾಗ ಅದೇ ಮಾರ್ಗದಿಂದ ಸುಲ್ತಾನನೂ, ಅವನ ಸಭಿಕರೂ ಕುದುರೆಗಳನ್ನೇರಿ ಹೋಗುತ್ತಿದ್ದರು. ಸಾದಿಯನ್ನು ನೋಡಿದೊಡನೆ ಇಬ್ಬರು ಸಭಿಕರು ಕುದುರೆಯಿಂದಿಳಿದು ಅತನ ಕಾಲಿಗೆರಗಿ. ಕುಶಲಪ್ರಶ್ನೆ ಮಾಡಿದರು. ಇದನ್ನೆಲ್ಲ ಸುಲ್ತಾನನು ಕಂಡು "ಈ ಸಭಿಕರು ನನಗೆ ಕೂಡ ಈ ತರದ ಸಂಮಾನವನ್ನು ಮಾಡುವುದಿಲ್ಲ; ಒಬ್ಬ ಸಾಮಾನ್ಯ ಗೃಹಸ್ಥನಿಗೆ ಮಾಡುವರಲ್ಲ." ಎಂದು ಮನದೊಳಗೆ ಅಸಮಾಧಾನವನ್ನು ತಾಳಿದನು. ಮನೆಗೆ ಬಂದ ಬಳಿಕ ಸುಲ್ತಾನನು ಆ ಸಭಿಕರನ್ನು ಹೀಗೇಕೆಂದು ಕೇಳಲು ಅವರು—ಒಡೆಯರೇ, ಅವನು ನಮ್ಮ ದೇಶದ ಎಲ್ಲ ಸುಶೀಲ ತರುಣರಿಗೆ ತಂದೆಯಂತೆ ಇದ್ದಾನೆ. ನಮ್ಮಲ್ಲೇನಾದರೂ ಸೌಜನ್ಯವು ಕಂಡುಬರುತ್ತಿದ್ದರೆ ಅದೆಲ್ಲ ಆ ಮಹಾತ್ಮನ ಉಪದೇಶದಿಂದಲೂ, ಉದಾಹರಣದಿಂದಲೂ ನಮಗೆ ಬಂದಿದೆಯೆಂದು ತಿಳಿಯಬೇಕು ಎಂದು ಬಿನ್ನಯಿಸಿದರು. ಆ ಇಬ್ಬರು ಸಭಿಕರು ಸ್ವಾಮಿನಿಷ್ಠರಾಗಿಯೂ ಸತ್ಯವಾದಿಗಳಾಗಿಯೂ ತೇಜಸ್ವಿಗಳಾಗಿಯೂ ಇದ್ದುದರಿಂದ ಸುಲ್ತಾನನಿಗೆ ಅತ್ಯಂತ ಪ್ರೀತಿಪಾತ್ರವಾಗಿದ್ದರು. ಇವರು ತನಗಿಂತ ಹೆಚ್ಚಿಗೆ ಸಂಮಾನವನ್ನು ತೋರಿಸಿದ ಆ ಪುರುಷನು ಮಹಾತ್ಮನಾಗಿರಬೇಕೆಂದು ನಂಬಿ, ಅವರಿಂದ ಒಂದು ಪಾಠವನ್ನು ಕಲಿತೆನೆಂದು ಭಾವಿಸಿದನಲ್ಲದೆ ಅಸಮಾಧಾನಪಡಲಿಲ್ಲ.

ಸುಲ್ತಾನನು ಒಂದು ದಿವಸ ಸಾದಿಯನ್ನು ಓಲಗಕ್ಕೆ ಬರಮಾಡಿಕೊಂಡು ತನಗೇನಾದರೂ ಉಪದೇಶಮಾಡಬೇಕೆಂದು ಕೇಳಿಕೊಂಡನು. ಆಗ ಸಾದಿಯು—ಈ ಲೋಕದಿಂದ ಹೋಗುವಾಗ ಸತ್ಕರ್ಮಗಳ ಪುಣ್ಯವೊಂದನ್ನಲ್ಲದೆ ಮತ್ತೆ ಏನನ್ನೂ ಒಯ್ಯಲಾರೆ; ಅರಸನು ಈಶ್ವರನ ಪಡಿನೆಳಲು. ಪ್ರತಿಬಿಂಬವು ಬಿಂಬದಂತಿರಬೇಕಾದುದು ಅವಶ್ಯಕ. ಎಲ್ಲ ಸಮಯಗಳಲ್ಲಿ ಪ್ರಜೆಗಳ ಹಿತವನ್ನು ಸರ್ವಪ್ರಯತ್ನಗಳಿಂದ ಅಂತಃಕರಣಪೂರ್ವಕವಾಗಿ ಸಾಧಿಸುವುದಕ್ಕಿಂತ ಬೇರೆ ಯಾವ

ವಿಚಾರವನ್ನೂ ಮನದಲ್ಲಿ ತರಬೇಡ. ಒಳ್ಳೆಯ ಪಾಲನದಿಂದ ಪ್ರಜೆಗಳೂ ಶಿಶು ಗಳೂ ಸುಸ್ವಭಾವದವರಾಗುವರು ಎಂದು ಉಪದೇಶಿಸಿದನು.

ಸೇಖಸಾದಿಯ ಕೆಲವು ವಚನಗಳು:—

೧. ರತ್ನವು ಕೆಸರಲ್ಲಿದ್ದರೂ ರತ್ನವೇ; ಧೂಳಿಯು ಆಕಾಶಕ್ಕೆ ನೆಗೆದರೂ ಧೂಳಿಯೇ.

೨. ಕೃತಘ್ನನಾದ ಮಾನವನಿಗಿಂತ ಕೃತಜ್ಞನಾದ ನಾಯಿಯು ಮೇಲು.

೩. ಪ್ರಾಣಭಯವಿಲ್ಲದವನೂ, ಪಾರಿತೋಷಿಕದ ಆಶೆಯಿಲ್ಲದವನೂ ಆದ ಸತ್ಯ ನಿಷ್ಠ ವ್ಯಕ್ತಿಯ ಸಲಹೆಯನ್ನು ಅರಸನು ಆದರದಿಂದ ಕೇಳಿಕೊಳ್ಳಬೇಕು.

೪. ಕುರಾನದಲ್ಲಿ ಹೇಳಿದ ಧರ್ಮನೀತಿಗಳು ಆಚರಣಕ್ಕಲ್ಲದೆ ಪಾರಾಯಣಕ್ಕಲ್ಲ.

೫. ಪ್ರತಿದಿವಸ ನೀನು ಮಾಡಿದ ಎಲ್ಲ ಕಾರ್ಯಗಳು ಕಾಮಕ್ರೋಧಾದಿ ಷಡ್ರಿಪುಗಳ ದಾಸನಾಗಿ ಮಾಡಿದಂತಹುವೋ ಪರಮೇಶ್ವರನ ದಾಸನಾಗಿ ಮಾಡಿದಂತಹುವೋ ನೋಡಿಕೊಳ್ಳು.

೬. ತಂಬೂರಿಯ ಸ್ವರವು ಸರಿಯಾಗಿ ಇರುವವರೆಗೆ ಗಾಯಕನು ಅದರ ಕಿವಿ ಹಿಡಿದು ತಿರುವುವುದಿಲ್ಲ. ಕೈಯೂ ಕಚ್ಚೆಯೂ ಸ್ವಾಧೀನದಲ್ಲಿದ್ದರೆ ಎಲ್ಲಿ ಹೋದರೂ ಭಯವಿಲ್ಲ.

೭. ಬಲಿಷ್ಠನೂ ಹಿಂಸಕನೂ ಆದವನನ್ನು ಮನ್ನಿಸುವುದಕ್ಕಿಂತ ತನ್ನಷ್ಟಕ್ಕೆ ತಾನು ದುಡಿದು ಹೊಟ್ಟೆಹೊರೆದುಕೊಳ್ಳುವವನನ್ನು ಮನ್ನಿಸು. ಮೃಗ ರಾಜನಾದ ಸಿಂಹಕ್ಕಿಂತ ಭಾರವಾಹಿಯಾದ ಕತ್ತೆಯು ಮೇಲು.

೮. ಆಳವಾದ ನೀರಿನಲ್ಲಿ ಕಲ್ಲನ್ನೊಗೆದರೆ ನೀರು ರಾಡಿಯಾಗುವುದಿಲ್ಲ. ಧರ್ಮಾ ಚರಣೆಯಿಂದ ಸುಸಂಸ್ಕೃತರಾದವರು ಸಾಮಾನ್ಯ ಕಾರಣದಿಂದ ಕ್ಷೋಭ ಗೊಳ್ಳುವುದಿಲ್ಲ.

೯. ದೇಹವು ಎಂದಾದರೂ ಒಂದುದಿನ ಮಣ್ಣಲ್ಲಿಯೇ ಬೆರೆತುಹೋಗುವುದಿರು ವುದರಿಂದ ಮೊದಲಿಂದಲೇ ಮಣ್ಣಿನ ಮನುಷ್ಯನಾಗು.

೧೦. ತಾನು ದುಡಿದು ಸಂಪಾದಿಸಿದ ಅಂಬಲಿಯು ಪರರ ಮನೆಯ ಮೇಜವಾ ನಿಯ ಪಂಚಪಕ್ವಾನ್ನಗಳಿಗಿಂತ ಮೇಲಾದುದು.

ವಿದ್ಯಾಭ್ಯಾಸದಲ್ಲಿ ಏಕಾಗ್ರತೆ.

## ೨೮. ಅರ್ಜುನ.

ಕೌರವರೂ ಪಾಂಡವರೂ ದ್ರೋಣಾಚಾರ್ಯರ ಬಳಿಯಲ್ಲಿ ಅಸ್ತ್ರವಿದ್ಯಾಭ್ಯಾಸವನ್ನು ಮಾಡಿದರು. ಅವರೆಲ್ಲರಲ್ಲಿ ಅರ್ಜುನನು ಬಹಳ ಪರಿಶ್ರಮಮಾಡುವವನು. ಹಗಲಿರುಳು ಆತನು ಹೆದೆಯೇರಿಸುವುದು, ಬಾಣವನ್ನು ಹೂಡುವುದು, ಗುರಿಯಿಡುವುದು ಮೊದಲಾದುವುಗಳ ಅಭ್ಯಾಸಮಾಡಿ ಎಡಗೈಯಿಂದಲೂ ಶರಸಂಧಾನಮಾಡುವುದನ್ನು ಸಾಧಿಸಿದನು. ಶಸ್ತ್ರವಿದ್ಯೆಯೊಂದನ್ನಲ್ಲದೆ ಹಲವು ವಿದ್ಯೆಗಳಲ್ಲಿ ಆತನು ತನ್ನ ಏಕಾಗ್ರತೆಯ ಬಲದಿಂದ ನೈಪುಣ್ಯವನ್ನು ಸಂಪಾದಿಸಿದನು.

ಆತನ ಏಕಾಗ್ರತೆಯು ಎಷ್ಟೆಂಬುದು ಒಂದು ಸಮಯದಲ್ಲಿ ಪ್ರಕಟವಾಯಿತು. ದ್ರೋಣಾಚಾರ್ಯರು ಒಂದು ದಿವಸ ಒಂದು ಕೃತ್ರಿಮ ಪಕ್ಷಿಯನ್ನು ಒಂದು ಗಿಡದ ತುದಿಯಲ್ಲಿ ಕುಳ್ಳಿರಿಸಿ ಬಿಲ್ಲಿಗೆ ಬಾಣಹೂಡಿ ಗುರಿಯಿಡಿರೆಂದು ತಮ್ಮ ಶಿಷ್ಯರಲ್ಲೊಬ್ಬೊಬ್ಬರಿಗೆ ಕ್ರಮದಿಂದ ಹೇಳುತ್ತ ನಡೆದರು. ಅವರು ಗುರಿಯಿಟ್ಟ ಬಳಿಕ ನಿಮಗೆ ಈಗ ಏನೇನು ಕಾಣಿಸುವುದೆಂದು ಕೇಳುತ್ತಿದ್ದರು. ಗಿಡದ ಬಳಿಯ ಕಲ್ಲು, ಗಿಡದ ಟೊಂಗೆ, ಎಲೆ ಮೊದಲಾದುವು ಕಾಣಿಸುವುವೆಂದು ಬಹುಶಃ ಎಲ್ಲರೂ ಹೇಳಿದರು. ಆದರೆ ಅರ್ಜುನನ ಬಾರಿ ಬರಲು ಮೇಲಿನಂತೆ ಆತನನ್ನೂ ಕೇಳಲು ಆತನು—ಪಕ್ಷಿಯ ತಲೆಯೊಂದಲ್ಲದೆ ಈ ಜಗತ್ತಿನೊಳಗಿನ ಇನ್ನೇನೂ ನನಗೆ ಕಾಣಿಸುವುದಿಲ್ಲವೆಂದು ಉತ್ತರಕೊಟ್ಟನು. ಗುರುಗಳಿಗೆ ಪರಮಾನಂದವಾಯಿತು. ಆಗ ಅವರು ಶಿಷ್ಯನನ್ನು ಮೈದಡವಿ ಮೆಚ್ಚಿ ಹರಸಿದರು.

---

ಅಧಿಕಾರಮದ

## ೨೯. ರಶಿಯದ ಮೇಜರ್

ರಶಿಯದ ಸಮ್ರಾಜನಾಗಿದ್ದ ಮೊದಲನೆಯ ಅಲೆಕ್‌ಜಾಂಡರನು ಒಮ್ಮೆ ವೇಷವನ್ನು ಬದಲಿಸಿಕೊಂಡು ಒಬ್ಬನೇ ಪಶ್ಚಿಮ ರಶಿಯದಲ್ಲಿ ಸಂಚಾರಕ್ಕೆ ಹೊರಟಿದ್ದನು. ಒಂದು ಸಣ್ಣ ಪಟ್ಟಣದಲ್ಲಿ ಗಾಡಿಯನ್ನು ನಿಲ್ಲಿಸುವ ಕೂಟದಲ್ಲಿ ಗಾಡಿಯನ್ನು ಬಿಟ್ಟು, ಕುದುರೆಗಳನ್ನು ಬದಲಿಸುವಷ್ಟರೊಳಗೆ ಊರನ್ನು ನೋಡಿಕೊಂಡು ಬರಬಹುದೆಂದು ತಿರುಗಾಡುತ್ತ ನಡೆದನು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಒಂದು ಚೌಕಿನಲ್ಲಿ ಮಾರ್ಗದ ಬದಿಯಲ್ಲಿ ಒಬ್ಬ ರಶಿಯನ್ ಆಫಿಸರನ್ನ

ಸಾಂಗ್ರಾಮಿಕ (ಲಷ್ಕರಿ) ವೇಷವನ್ನು ಧರಿಸಿಕೊಂಡು ನಿಂತಿದ್ದನು. ಆತನ ನಿಲುವಿಕೆಯಲ್ಲಿ ಗರ್ವವು ಕಂಡುಬರುತ್ತಿತ್ತು. ಕೈಗಳನ್ನು ಹಿಂದೆ ಮಾಡಿಕೊಂಡು ಎದೆಯನ್ನುಬ್ಬಿಸಿ ಕಾಲುಗಳನ್ನಗಲಿಸಿ ಬಾಯಲ್ಲಿ ಚಿರೂಟನ್ನು ಹಿಡಿದುಕೊಂಡು ತೇಲುಗಣ್ಣು ಹಾಕುತ್ತ ನಿಂತಿರುವ ಆ ಗೃಹಸ್ಥನನ್ನು ಸ್ವಲ್ಪ ಮಾತಾಡಿಸಬೇಕೆಂದು ಸಮ್ರಾಜನು—ಅಯ್ಯಾ, ಕಾಲೋಗಾ ಪಟ್ಟಣಕ್ಕೆ ಹೋಗುವ ದಾರಿಯಾವುದು ಎಂದು ಕೇಳಿದನು. ಸಾಮಾನ್ಯವೇಷವನ್ನು ಧರಿಸಿದ ಒಬ್ಬ ಮನುಷ್ಯನು, ತನ್ನಂತಹ ಒಬ್ಬ ಅಧಿಕಾರಿಯನ್ನು ನಾಡಾಡಿಗರನ್ನು ಕೇಳುವಂತೆ ದಾರಿಯ ಕೇಳುವ ಸಾಹಸವನ್ನು ಮಾಡಿದರೆ ಮೇಜರ್ ಸಾಹೇಬರಿಗೆ ಕೋಪವು ಬರಬೇಡವೇ? ಮೇಜರನು ಮೋರೆಯನ್ನು ಕಿವುಚಿ ರುಕ್ಷಧ್ವನಿಯಿಂದ ಸಂಕ್ಷೇಪವಾಗಿ "ಎಡಕ್ಕೆ" ಎಂದು ಉತ್ತರವಿತ್ತನು. ಮೇಜರನ ಈ ಗರ್ವದ ಬೆಡಗನ್ನು ಕಂಡು ಚಕ್ರವರ್ತಿಯು ಮನದಲ್ಲಿ ನಗುತ್ತ—"ಮಹಾಶಯಾ, ತಮಗೆ ಕೋಪವು ಬಾರದಿದ್ದರೆ ಇನ್ನೊಂದು ಮಾತನ್ನು ಕೇಳಬೇಕೆಂದು ಮಾಡಿರುವೆನು" ಎಂದನು. ಮೇಜರನು ಬೇಸರದ ದನಿಯಿಂದ 'ಆಗಲಿ' ಎಂದು ನುಡಿದನು.

ಚಕ್ರವರ್ತಿ—ಸೈನ್ಯದಲ್ಲಿ ತಾವು ಈಗ ಯಾವ ನೌಕರಿಯಲ್ಲಿರುವಿರಿ?

ಮೇಜರನು ಚಿರೂಟಿನ ಹೊಗೆಯ ಸಣ್ಣ ಮೋಡಗಳನ್ನು ಪ್ರಾಶ್ನಿಕನ ಮೋರೆಯ ಕಡೆಗೆ ಹಾರಿಸುತ್ತ ಎದೆಯುಬ್ಬಿಸಿ 'ತರ್ಕಮಾಡು' ಎಂದನು.

ಚಕ್ರವರ್ತಿಯ ಪ್ರಶ್ನ—ಲೆಫ್ಟ್‌ನಂಟ್? ಉತ್ತರ—ಇನ್ನೂ ಮೇಲೆ; ಪ್ರ—ಕೆಪ್ಟನ್? ಉ—ಇನ್ನೂ ಮೇಲೆ; ಪ್ರ—ಮೇಜರ್? ಉ—ಈಗ ಸರಿಯಾಯಿತು. ಚಿರೂಟಿನ ಹೊಗೆಯ ಮೋಡಗಳು ಹೆಚ್ಚಿಗೆ ಮುಸುಕತೊಡಗಿದುವು.

ಇಷ್ಟು ದೊಡ್ಡ ಮನುಷ್ಯನೆಂದ ಬಳಿಕ ಚಕ್ರವರ್ತಿಯು ವಿನಯದಿಂದ 'ಸಲಾಂ' ಮಾಡಿದನು. ಆಗ ಮೇಜರನು ಈಗ ನನ್ನ ಪಾಳಿಯು; ನೀನು ಯಾರು! ಚಕ್ರವರ್ತಿ-ತಾವೂ ತರ್ಕಮಾಡಿ ನೋಡಬಹುದಲ್ಲವೇ? ಮೇಜರ್-ಹಳ್ಳಿಯ ಹ್ವಾಲಂಟಿಯರನೋ? ಚಕ್ರವರ್ತಿ—ಇನ್ನೂ ಮೇಲೆ; ಪ್ರಶ್ನ—ಕರ್ಪೋರಲ್? ಉ—ಇನ್ನೂ ಮೇಲೆ; ಪ್ರ—ಲೆಫ್ಟನಂಟ್? ಉ—ಇನ್ನೂ ಮೇಲೆ; ಪ್ರ—ಕೆಪ್ಟನ್ ಉ—ಇನ್ನೂ ಮೇಲೆ; ಪ್ರ—ಮೇಜರ್? ಉ—ಇನ್ನೂ ಮೇಲೆ; ಪ್ರ—ಕರ್ನಲ್? ಉ—ಇನ್ನೂ ಮೇಲೆ; ಮೇಜರನು ಈಗ ಬಾಯೊಳಗಿನ ಚಿರೂ

ಟನ್ನು ಕೈಯಲ್ಲಿ ಹಿಡಿದುಕೊಂಡು ಸರಳವಾಗಿ ನಿಂತು ವಿನಯದಿಂದ—ಹಾಗಾದರೆ ತಾವು ಜನರಲ್ ಸಾಹೇಬರೋ ? ಎಂದನು. ಉ—ಇನ್ನೂ ಮೇಲೆ; ಮೇಜರನು ಟೊಪ್ಪಿಗೆಗೆ ಕೈ ಮುಟ್ಟಿಸಿ ಸಾಂಗ್ರಾಮಿಕ ( ಲಷ್ಕರಿ ) ಸಲಾಂ ಮಾಡಿ—ತಾವು ಮಹಾಮಾನ್ಯರಾದ ಫೀಲ್ಡ್ ಮಾರ್ಶಲರೋ ಎಂದು ಕೇಳಿದನು. ಮೇಜರನ ಮೈಯಲ್ಲಿ ನಡುಗು ಹುಟ್ಟಲು ಕೈಯೊಳಗಿನ ಚಿರೂಟು ಯಾವಾಗಲೋ ಕೆಳಗೆ ಬಿದ್ದು ಹೋಯಿತು. ಗರ್ವವೆಲ್ಲ ಅಡಗಿ ಹೋಯಿತು. ಮೋರೆಯ ಮೇಲೆ ಅಂಜಿಕೆಯು ಕಳೆಯೇರಿತು.

“ ಇನ್ನೊಂದು ಬಾರಿ ತರ್ಕಮಾಡಿ ನೋಡು ” ಎಂದು ಚಕ್ರವರ್ತಿಯು ನಗುಮೋರೆಯಿಂದ ನುಡಿಯಲು ಮೇಜರನ ಸರ್ವಾಂಗವೂ ಜುಮ್ಮೆಂದು ಕಂಪಿಸಿತು. ಕಣ್ಣಿಗೆ ಕತ್ತಲೆ ಕವಿಯಿತು. ಆಗ ಅವನು ಕುಗ್ಗಿದ ದನಿಯಿಂದ—ಹಾಗಾದರೆ ಸ್ವಯಂ ಚಕ್ರವರ್ತಿಗಳೋ ಎಂದು ಕೇಳಿದನು. ನಿನ್ನ ತರ್ಕವು ಈಗ ಸರಿಯಾಯಿತು, ಎಂದು ಚಕ್ರವರ್ತಿಯು ನುಡಿಯಲು ಮೇಜರನು ಕೈಗಳನ್ನು ಜೋಡಿಸಿ, ಕಾಲುಗಳನ್ನು ನೆಲದ ಮೇಲೆ ಊರಿ ತಲೆವಾಗಿಸಿ—ಮಹಾರಾಜಾಧಿರಾಜರೇ, ಕ್ಷಮಿಸಿರಿ, ಸೇವಕನ ಸರ್ವಾಪರಾಧಗಳನ್ನು ಕ್ಷಮಿಸಿರಿ ಎಂದು ಬೇಡಿಕೊಂಡನು. ಆಗ ಮೇಜರನಿಗೆ ತನಗೆ ತಕ್ಕ ಶಾಸನವಾಗುವ ವಿಷಯದಲ್ಲಿ ಸಂಶಯವುಳಿದಿರಲಿಲ್ಲ. ಚಕ್ರವರ್ತಿಯು—ಇದರಲ್ಲಿ ಕ್ಷಮಿಸುವುದೇನಿದೆ? ನಾನು ದಾರಿಯನ್ನು ಕೇಳಿದುದಕ್ಕೆ ತಾವು ಕೂಡಲೆ ಹೇಳಿಬಿಟ್ಟಿರಿ, ಅದಕ್ಕೆ ಕೃತಜ್ಞನಾಗಿದ್ದೇನೆ ಎಂದು ಹೇಳಿ ತನ್ನ ಗಾಡಿಯನ್ನು ನಿಲ್ಲಿಸಿದಲ್ಲಿಗೆ ಹೊರಟುಹೋದನು.

ಮೇಜರನಿಗೆ ಕೂಡಲೆ ತಕ್ಕ ಶಾಸನ ಮಾಡಿದ ಅಪ್ಪಣೆ ( ಆರ್ಡರ್ ) ಬಂದಿತು.

ತಮಗಿಂತ ಕೆಳಗಿನ ತರಗತಿಯವರನ್ನು ಇಲ್ಲವೆ ಸಮಾನಸ್ಕಂಧರನ್ನು ಕಂಡು ಗರ್ವವನ್ನು ತೋರಿಸಬೇಕೆಂಬ ಇಚ್ಛೆಯು ಉಂಟಾದಾಗಳೆಲ್ಲ ರಶಿಯದ ಜನರಿಗೆ ಆ ಸಾಮಾನ್ಯವೇಷಧಾರಿಯೂ, ಮಧುರಭಾಷಿಯೂ, ಸೌಜನ್ಯಭೂಷಿತನೂ ಆದ ತಮ್ಮ ಚಕ್ರವರ್ತಿಯ ಮೂರ್ತಿಯು ಕಣ್ಣೆದುರಿಗೆ ಕಟ್ಟಿದಂತಾಗಿ ತಮ್ಮ ಸ್ವಭಾವವನ್ನು ತಿದ್ದಿಕೊಳ್ಳುವ ಕೆಲಸದಲ್ಲಿ ಅಂದಿನಿಂದ ನೆರವಾಗುತ್ತಲಿದೆ.

---

## ೩೦ ಹಾತೆಮತಾಇ.

ಪೂರ್ವಕಾಲದಲ್ಲಿ ಪರ್ಸಿಯಾ ದೇಶದಲ್ಲಿ ಹಾತೆಮತಾಇ ಎಂಬ ಒಬ್ಬ ಅರಸನು ಆಗಿಹೋದನು. ಸರ್ವ ಪ್ರಾಣಿಗಳ ಕಲ್ಯಾಣವನ್ನು ಕೋರುವುದೇ ಆತನ ಜೀವನವ್ರತವು. ಅರಬದೇಶದ ರಾಜನು ಒಮ್ಮೆ ಪರ್ಸಿಯಾದೇಶದ ಮೇಲೆ ದಾಳಿಯಿಟ್ಟನು. ಹಾತೆಮತಾಇಯು ಆತನೊಡನೆ ಯುದ್ಧವನ್ನು ಹೂಡಿದರೆ ಉಭಯಪಕ್ಷಗಳಲ್ಲಿಯೂ ಪ್ರಾಣಹಾನಿಯಾಗುವುದೆಂದು ಬಗೆದು ತಾನೇ ರಾಜಧಾನಿಯನ್ನು ಬಿಟ್ಟು ಅಡವಿಗೆ ಹೋಗಿಬಿಟ್ಟನು. ಅರಬರಾಜನು ನಿಶ್ಚಿಂತನಾಗಿರಬೇಕೆಂದು ಬಯಸಿ ಹಾತೆಮನನ್ನು ಹಿಡಿದುಕೊಟ್ಟವರಿಗೆ ದೊಡ್ಡ ಪಾರಿತೋಷಿಕವನ್ನು ಕೊಡುವೆನೆಂದು ರಾಜ್ಯದಲ್ಲೆಲ್ಲ ಸಾರಿದನು. ಹಾತೆಮತಾಇಯು ಅವಿತುಕೊಂಡಿದ್ದ ಅಡವಿಗೆ ಒಬ್ಬ ಮುದುಕನು ಹೆಂಡತಿಯೊಡನೆ ಕಟ್ಟಿಗೆ ಆರಿಸುವುದಕ್ಕೆ ಹೋಗುತ್ತಿದ್ದನು. ಅವರು ಕಟ್ಟಿಗೆಗಳನ್ನು ಆರಿಸುತ್ತಿರುವಲ್ಲಿಯೇ ಗಿಡಗಂಟಿಗಳ ಮರೆಯಲ್ಲಿ ಹಾತೆಮನು ಇದ್ದನು. ಈ ಗಂಡಹೆಂಡಿರ ಮಾತುಗಳು ಆತನಿಗೆ ಕೇಳಬರುತ್ತಿದ್ದುವಾದರೂ ಅವರಿಗೆ ಈತನು ಕಾಣಿಸುತ್ತಿರಲಿಲ್ಲ. ಮಧ್ಯಾಹ್ನದ ಬಿಸಿಲ ಜಳಕ್ಕೆ ಬಳಲಿ ಬಾಯಾರಿ ಮುದುಕನು—‘ ಅಯ್ಯೋ ! ಇನ್ನು ನಾನು ಈ ಕಷ್ಟದ ಹೋರೆಯನ್ನು ಮಾಡಲಾರೆನು ’ ಎಂದು ಉಸಿರುಗರೆದು ಅಲ್ಲಿಯೇ ಕುಳಿತುಬಿಟ್ಟನು. ಆಗ ಹೆಂಡತಿಯು—ಅಹಾ! ಹಾತೆಮನು ಕೈಗೆ ಸಿಕ್ಕಿದರೆ ನಮಗೆ ಈ ಕಷ್ಟದ ಹೋರೆಯನ್ನು ಇನ್ನು ಮಾಡಬೇಕಾಗುವುದಿಲ್ಲ ಎಂದು ನುಡಿದಳು. ಪರಮದಯಾಳುವಾದ ಹಾತೆಮನು ಅವರ ಈ ದುಃಖದ ಮಾತುಗಳನ್ನು ಕೇಳಿ ಒಳಗೆ ನಿಲ್ಲಲಾರದೆ ಅವರೆದುರಿಗೆ ಬಂದು--ನಾನೇ ಹಾತೆಮನು; ನನ್ನನ್ನು ಅರಸನ ಬಳಿಗೆ ಒಯ್ಯಿರಿ ಎಂದನು. ಮುದುಕನು—ನಾನು ಇಂತಹ ಕೆಲಸವನ್ನು ಮಾಡಲಾರೆನು. ತಾವು ಹೊರಟುಹೋಗಿರಿ ಎಂದನು. ಆಗ ಹಾತೆಮನು—ಅಯ್ಯಾ, ನಾನು ಇನ್ನಾವನೊಬ್ಬ ದುಷ್ಟನ ಕೈಗೆ ಸಿಕ್ಕಿದರೆ ನನ್ನನ್ನು ಹೊಡೆದು ಬಡಿದು ಆತನು ಒಯ್ಯಬಹುದು. ನೀನು ಬಡವನೂ ಸಂಭಾವಿತನೂ ಆಗಿರುವೆ. ಆದದರಿಂದ ನೀನೇ ನನ್ನನ್ನು ಅರಸನ ಬಳಿಗೆ ಒಯ್ಯಿ ಎಂದನು. ಇಷ್ಟರಲ್ಲಿ ಆ ದಾರಿಯಿಂದ ಹೋಗುತ್ತಿದ್ದ ಇನ್ನೊಬ್ಬನು ಇವರ ಮಾತುಗಳ ಸಂದರ್ಭದಿಂದ ಈತನೇ ಹಾತೆಮನೆಂದು ತಿಳಿದು ಆತನನ್ನು ಹಿಡಿದು

ಕೊಂಡು ಅರಸನ ಬಳಿಗೆ ನಡೆದನು. ಹಾತೆಮನು ಸನ್ನೆ ಮಾಡಿದುದರಿಂದ ಮುದುಕನೂ ಸಂಗಡ ನಡೆದನು. ಹಾತೆಮನನ್ನು ಹಿಡಿದೊಯ್ದವನು ಅರಸನ ಬಳಿಗೆ ಹೋಗಿ–ಈತನೇ ಹಾತೆಮನು; ತಾವು ಪ್ರಕಟಿಸಿದ ಪಾರಿತೋಷಿಕವನ್ನು ಕೊಡಿರಿ ಎಂದು ಕೇಳಿದನು. ಆಗ ಹಾತೆಮತಾಇಯು—ಮಹಾರಾಜರೇ, ಈತನು ನನ್ನನ್ನು ಹಿಡಿದಿಲ್ಲ. ಈ ಬಡ ಮುದುಕನ ಕಷ್ಟದ ಸ್ಥಿತಿಯನ್ನು ಕಂಡು ನಾನೇ ಈತನ ಕೈಗೆ ಸಿಕ್ಕಿದ್ದೇನೆ. ಆದುದರಿಂದ ತಾವು ಪಾರಿತೋಷಿಕವನ್ನು ಈ ಮುದಕನಿಗೆ ಕೊಡಬೇಕು. ಎಂದು ಬಿನ್ನಯಿಸಿದನು. ಹಾತೆಮತಾಇಯ ಈ ದೊಡ್ಡತನಕ್ಕೆ ಅರಬರಾಜನು ಬೆರಗಾಗಿ, ಮೆಚ್ಚಿ ಕೈಜೋಡಿಸಿ— ಮುದುಕನಿಗೆ ಪಾರಿತೋಷಿಕವನ್ನು ಕೊಡುವೆನು; ಆದರೆ ತಾವು ನನ್ನ ತಪ್ಪನ್ನು ಕ್ಷಮಿಸಿ ತಮ್ಮ ರಾಜ್ಯವನ್ನು ತಾವೇ ಆಳಬೇಕು. ಎಂದು ಬೇಡಿಕೊಂಡನು.

---

ಅಣ್ಣನಲ್ಲಿ ವಿಧೇಯತೆ

## ೩೧ ಅರ್ಜುನ.

ಭರತಖಂಡದ ಅವಿಭಕ್ತಕುಟುಂಬಪದ್ಧತಿಯಲ್ಲಿ ಹಲವು ಗುಣಗಳುಂಟು. ಮನೆಯ ಯಜಮಾನನಿಗೆ ಎಲ್ಲರೂ ವಿಧೇಯರಾಗಿರುವರು. ಮನೆಯ ಯಜಮಾನನು ಎಲ್ಲರನ್ನು ಸಲಹುವ ಹೊರೆಯನ್ನು ಹೊರುವನು. ಈ ಕಾಲದಲ್ಲಿ ಅಣ್ಣನೊಂದೆಡೆಗೆ ತಮ್ಮನೊಂದೆಡೆಗೆ ಜೀವನವೃತ್ತಿಗಾಗಿ ಅತ್ತಿತ್ತ ಹೋಗಬೇಕಾಗುವದರಿಂದಲೂ, ಹೆಂಗಸರ ಅಸೂಯಾದಿ ದುರ್ಗುಣಗಳಿಂದಲೂ ಅವಿಭಕ್ತಪದ್ಧತಿಯು ಲೋಪವಾಗುತ್ತ ನಡೆದಿದೆ. ಈ ಹೊಸಕಾಲದಲ್ಲಿ ನಮ್ಮಲ್ಲಿ ಗೃಹೈಕ್ಯಭಾವನೆಯು ನಷ್ಟವಾಗುತ್ತ ನಡೆಯಿತು. ಆದರೆ ಜಪಾನ ಇಂಗ್ಲಂಡ್ ಮೊದಲಾದ ದೇಶಗಳಂತೆ ದೇಶಾಭಿಮಾನವು ಮಾತ್ರ ನಮ್ಮಲ್ಲಿ ಜಾಗ್ರತವಾಗಲಿಲ್ಲ.

ಮಹಾಭಾರತದೊಳಗಿನ ಎಲ್ಲ ಪಾತ್ರಗಳಲ್ಲಿ ಅರ್ಜುನನು ಶೌರ್ಯ, ಕಾರ್ಯನಿರ್ವಾಹಸಾಮರ್ಥ್ಯ ಮೊದಲಾದುವುಗಳಿಂದಲೂ, ಬೇರೆ ಸದ್ಗುಣಗಳಿಂದಲೂ ಶ್ರೇಷ್ಠನೆಂದು ಕಂಡು ಬರುವುದು. ಅಣ್ಣನಿಗೆ ತೋರಿಸಿದ ವಿಧೇಯತೆಯಲ್ಲಿ ಆತನು ಅನುಕರಣೀಯನಾಗಿರುವನು.

ಧರ್ಮರಾಜನು ದ್ಯೂತವ್ಯಸನದಿಂದ ದ್ರೌಪದಿಯನ್ನು ಪಣದಲ್ಲಿ ಸೋಲಲು ಕೌರವರು ರಾಜಸಭೆಯಲ್ಲಿ ಆಕೆಯ ಅಪಮಾನ ಮಾಡತೊಡಗಿದರು. ಆಗ ಭೀಮಸೇನನು ಧರ್ಮರಾಜನನ್ನು ಹಳಿಯತೊಡಗಿದನು. ಆಗ ಅರ್ಜುನನು—

ಅಣ್ಣಾ, ಶತ್ರುಗಳು ನಗುವಂತೆ ಮಾಡಬೇಡ, ಧರ್ಮವನ್ನು ಸ್ಮರಿಸು; ಹಿರಿಯ ಅಣ್ಣನ ಅಪಮಾನ ಮಾಡಬೇಡ ಎಂದು ಭೀಮನಿಗೆ ಹೇಳಿದನು.

ಚಿತ್ರರಥನೆಂಬ ಗಂಧರ್ವನು ದುರ್ಯೋಧನನನ್ನು ಸೆರೆಹಿಡಿದು ಒಯ್ಯಲು ಮಹಾತ್ಮನಾದ ಯುಧಿಷ್ಠಿರನು ತಮ್ಮ ಬಂಧುವಾದ ಅತನನ್ನು ಬಿಡಿಸಿಕೊಂಡು ಬಾ ಎಂದು ಅರ್ಜುನನಿಗೆ ಹೇಳಿದನು. ಅರ್ಜುನನು ಹಿಂದೆ ಮುಂದೆ ನೋಡದೆ ಬಿಡಿಸಿಕೊಂಡು ಬಂದನು.



ಅಣ್ಣನ ಅಪ್ಪಣೆಯಿಂದ ಅರ್ಜುನನು ದೇವಲೋಕಕ್ಕೆ ಅಸ್ತ್ರಪ್ರಾಪ್ತಿಗಾಗಿ ಹೋದಾಗ ದೇವೇಂದ್ರನು ಅತನಿಗೆ ನಿತ್ಯಸ್ವರ್ಗವಾಸದ ಲೋಭವನ್ನು ತೋರಿಸಿದನು. ಆದರೆ ಅರ್ಜುನನು ಆ ಮೋಹಕ್ಕೆ ವಶವಾಗದೆ—ನಾನು ಅಣ್ಣನ ಅಪ್ಪಣೆಯಮೇರೆಗೆ ಇಲ್ಲಿ ಅಸ್ತ್ರವಿದ್ಯೆಯನ್ನು ಕಲಿತು ಮರಳಿ ಹೋಗುವವನಲ್ಲದೆ ಸ್ವರ್ಗಸುಖವನ್ನು ಬಯಸುವುದಿಲ್ಲ ಎಂದು ಹೇಳಿದನು.

ಯುದ್ಧದಲ್ಲಿ ಎದುರಿಸಿದಾಗಳಲ್ಲದೆ ಬೇರೆ ಸಮಯದಲ್ಲಿ ಧರ್ಮರಾಜನ ಒಂದು ರಕ್ತಬಿಂದುವನ್ನು ಕೂಡ ನೆಲದ ಮೇಲೆ ಕೆಡವಿದವರನ್ನು ಸಂಹರಿಸುವೆನೆಂದು ಅರ್ಜುನನು ಪ್ರತಿಜ್ಞೆಮಾಡಿದ್ದನು. ಉತ್ತರಗೋಗ್ರಹಣದ ತರುವಾಯ ಧರ್ಮರಾಜ ( ಕಂಕಭಟ್ಟ ) ನು ಸಾರಥಿಯಾದ ಬೃಹನ್ನಳೆಯನ್ನೇ ( ಅರ್ಜುನನನ್ನೇ ) ಮತ್ತೆ ಮತ್ತೆ ಹೊಗಳತೊಡಗಲು ವಿರಾಟರಾಜನು ಸಿಟ್ಟಾಗಿ ಕೈಯೊಳಗಿನ ದಾಳಗಳನ್ನು ಧರ್ಮರಾಜನ ಮೋರೆಯ ಮೇಲೆ ಒಗೆದನು. ಧರ್ಮರಾಜನ ಹಣೆಯಿಂದ ನೆತ್ತರು ಸುರಿಯತೊಡಗಿತು. ಕ್ಷಮಾಶೀಲನಾದ ಧರ್ಮರಾಜನು ಅದನ್ನು ನೆಲದ ಮೇಲೆ ಬೀಳಗೊಡದೆ ತಮಗೆ ಆಶ್ರಯವನ್ನಿತ್ತ ವಿರಾಟನನು ಕಾಪಾಡಿದನು. ಇಲ್ಲದಿದ್ದರೆ ಅರ್ಜುನನು ತನ್ನ ಅಣ್ಣನಿಗೆ ಅಪಮಾನ ಮಾಡಿದ ವಿರಾಟರಾಜನ ಸರ್ವಸ್ವನಾಶ ಮಾಡುತ್ತಿದ್ದನು.

ಸುಭದ್ರೆಯನ್ನು ಮದುವೆಯಾಗುವಾಗ ಅರ್ಜುನನು ತಮ್ಮ ಆಪ್ತಾಲೋಚಕನಾದ ಶ್ರೀಕೃಷ್ಣನ ಸಂಮತಿಯನ್ನು ಪಡೆದುಕೊಂಡಿದ್ದರೂ ಅಣ್ಣನಾದ ಧರ್ಮರಾಜನ ಸಂಮತಿಯನ್ನೂ ಅಪೇಕ್ಷಿಸಿದನು.

ಅಭಿಮನ್ಯುಬಾಲಕನು ಚಕ್ರವ್ಯೂಹವನ್ನು ಭೇದಿಸುವ ಕೌಶಲವನ್ನರಿತಿದ್ದನು. ಆದರೆ ಅದರಿಂದ ಹೊರಗೆ ಬರುವುದನ್ನು ಅರಿತಿರಲಿಲ್ಲ. ಈ ಮಾತನ್ನು

ಧರ್ಮರಾಜನು ಪೂರ್ಣವಾಗಿ ಬಲ್ಲವನಾಗಿದ್ದರೂ ದ್ರೋಣನ ಆಕ್ರಮಣ ಕಾಲ ದಲ್ಲಿ ಆವೇಶಗೊಂಡವನಾಗಿ ಬಾಲಕನಿಗೆ ವ್ಯೂಹದಲ್ಲಿ ಪ್ರವೇಶಿಸುವುದಕ್ಕೆ ಅಪ್ಪಣೆ ಯನ್ನಿತ್ತನು. ಇದರಲ್ಲಿಯೇ ಅರ್ಜುನನ ಆ ಪ್ರಾಣಪ್ರಿಯ ಪುತ್ರನು ಮಡಿದನು. ಆದರೆ ಮಗನನ್ನು ಕುರಿತು ಶೋಕಮಾಡುವಾಗ ಈ ಮಾತಿನ ಉಲ್ಲೇಖವು ಅರ್ಜುನನ ಬಾಯಿಂದ ಸ್ವಲ್ಪವೂ ಹೊರಡಲಿಲ್ಲ.

ಕುರುಕ್ಷೇತ್ರದ ಮಹಾಯುದ್ಧವು ಆರಂಭವಾಗುವ ಪೂರ್ವದಲ್ಲಿ ಸ್ವಜನ ಕ್ಷಯವಾಗುವುದೆಂಬ ಕನಿಕರದಿಂದ ಅರ್ಜುನನು ಯುದ್ಧವನ್ನು ಮಾಡುವ ಮನ ಸ್ಸಿಲ್ಲದವನಾಗಿದ್ದನು. ಶ್ರೀಕೃಷ್ಣನು ಆತನಿಗೆ ನಿಷ್ಕಾಮಕರ್ಮಾನುಷ್ಠಾನ ಮಾಡುವ, ಮತ್ತು ಕ್ಷತ್ರಿಯ ಧರ್ಮವನ್ನು ಪಾಲಿಸುವ ಉಪದೇಶವನ್ನು ಮಾಡಿದ ಬಳಿಕ ಆತನು ಯುದ್ಧಕ್ಕೆ ತೊಡಗಿದನು. ಧರ್ಮರಾಜನು ಯುದ್ಧವು ಮುಗಿದ ಬಳಿಕ ಸ್ವಜನರಕ್ತದಿಂದ ತೋದ ರಾಜ್ಯವನ್ನು ಆಳಲು ಒಪ್ಪಲಿಲ್ಲ. ಅರ್ಜುನನು, ಧರ್ಮರಾಜನಿಗೆ ಅರಸೊತ್ತಿಗೆ ದೊರೆಯಬೇಕೆಂದೇ ಯುದ್ಧವನ್ನು ಮಾಡಿದ್ದನು. ಮತ್ತು ತನ್ನ ಪ್ರಾಣಪ್ರಿಯ ಪುತ್ರನನ್ನು ಕಳೆದುಕೊಂಡಿದ್ದನು ಅರ್ಜುನನು ಈ ಮಾತುಗಳನ್ನು ಧರ್ಮರಾಜನಿಗೆ ತಿಳಿಸಹೋಗಿ ಆತನಿಂದ ಬಿರುನುಡಿಗಳನ್ನು ಮಾತ್ರ ಆಡಿಸಿಕೊಂಡನು. ಅರ್ಜುನನು ಆತನ ಮಾತುಗಳಿಗೆ ಪ್ರತಿಯಾಗಿ ಏನೂ ಮಾತಾಡಲಿಲ್ಲ.

ಹಿರಿಯರಿಗೆ ಎದುರುತ್ತರವನ್ನು ಕೊಡುವುದಕ್ಕೆ ಈಗಿನವರು ಹೇಸುವುದಿಲ್ಲ. ಅವರ ಅಪಮಾನವಾಗದಂತೆ ಪ್ರಯತ್ನಿಸುವುದಂತೂ ದೂರದಲ್ಲುಳಿಯಿತು; ತಿರುಗಿ ತಾವೇ ಅವರ ಅಪಮಾನ ಮಾಡುತ್ತಿರುತ್ತಾರೆ. ಈ ನೀತಿಗೇಡಿತನವು ಅನುಚಿತವು.

---

ನಂಬಿಗೆಯ ಮಹಿಮೆ.

## ೩೨ ಮಿ. ಫಾಕ್ಸ್.

ಒಂದಾನೊಂದು ದಿವಸ ವಕ್ತಾರನೆಂದು ಹೆಸರಾದ ಫಾಕ್ಸ್ ಸಾಹೇಬನು ಒಂದು ಪತ್ರವನ್ನು ಬರೆದು ಅದರಮೇಲೆ ಹಣವನ್ನೆಣಿಸಿ ಎಣಿಸಿ ಇಡುತ್ತಿದ್ದನು. ಈ ಹೊತ್ತಿಗೆ ಇನ್ನೊಬ್ಬ ಅಂಗಡಿಕಾರನು ಬಂದು— ನೀವು ಕೊಡಬೇಕಾಗಿದ್ದ ಹಣವನ್ನು ಈಗಲೇ ಕೊಟ್ಟರೆ ಒಳ್ಳೆಯದಾಗುವುದು; ಸಾವುಕಾರರ ಹಣವನ್ನು

ಇಂದೇ ಮುಟ್ಟಿಸಬೇಕಾಗಿರುವುದರಿಂದ ಹಣದ ಅವಶ್ಯಕತೆಯುಂಟೆಂದು ಬಂದೆನು; ಇವು 'ಬಿಲ್ಲು ರಿಸೀಟು' ಗಳು ಎಂದು ಹೇಳಿ ಅಲ್ಲಿ ನಿಂತನು. ಫಾಕ್ಸ್ ಸಾಹೇಬನು—೩, ೪ ದಿವಸಗಳ ತರುವಾಯ ನಿಮ್ಮ ಹಣವನ್ನು ಕೊಡುವೆನು; ಈ ಹಣವನ್ನು ಶೇರಿಡೆನನಿಗೆ ಕೊಡಬೇಕಾಗಿದೆ; ಆತನ ಬಳಿಯಲ್ಲಿ ಲೇಖವನ್ನೇನೂ ಕೊಡದೆ ಕೈಗಡವೆಂದು ತಂದಿರುವೆನು; ನನಗೆ ಆಕಸ್ಮಿಕ ಮರಣವೊದಗಿದರೆ ಆತನಿಗೆ ಸಲ್ಲಬೇಕಾದ ಹಣದ ಪ್ರಮಾಣಲೇಖವು (ಪುರಾವೆ) ಆತನ ಬಳಿಯಲ್ಲಿ ಇಲ್ಲ. ಎಂದು ಹೇಳಿದನು. ಬಂದ ಅಂಗಡಿಕಾರನು ಅನುಮಾನಪಡದೆ-ಇದು ನೋಡಿರಿ; ನಿಮ್ಮ ಉದ್ಧರಿಲೆಕ್ಕವನ್ನು ಬರೆದಿದ್ದ ಪುಟವನ್ನೂ, ಬಿಲ್ಲನ್ನೂ ಹರಿದು ಚೆಲ್ಲುವೆನು ಎಂದು ಹೇಳಿ ಆ ಕಾಗದಗಳನ್ನು ಚೂರು ಚೂರು ಮಾಡಿ ಚೆಲ್ಲಿ ನನ್ನ ಬಳಿಯಲ್ಲಿಯೂ ಪ್ರಮಾಣಲೇಖವನ್ನಿಟ್ಟುಕೊಳ್ಳಲಿಲ್ಲವೆಂದು ಹೇಳಿದನು. ಅಂಗಡಿಕಾರನು ತನ್ನ ಮೇಲಿನ ನಂಬಿಗೆಯಿಂದ ಹಾಗೆ ಮಾಡಿದುದನ್ನು ಕಂಡು ಈ ಸೌಜನ್ಯಕ್ಕೂ ವಿಶ್ವಾಸಕ್ಕೂ ಮೋಹಿತನಾದ ಫಾಕ್ಸ್‌ಸಾಹೇಬನು ಒಳ್ಳೆಯದು, ನೀವೇ ಈ ಹಣವನ್ನು ಈಗ ಒಯ್ಯಿರಿ; ನಿಮ್ಮ ಉದ್ಧರಿಯು ಮೊದಲಿನದಾಗಿದೆ; ಶೇರಿಡೆನನಿಗೇ ೩, ೪ ದಿವಸಗಳ ತರುವಾಯ ಹಣವನ್ನು ಕಳುಹುವೆನು; ನಿಮಗೆ ಹಣದ ಅವಶ್ಯಕತೆಯು ಹೆಚ್ಚಿಗೆ ಇದ್ದಂತೆ ತೋರುವುದು; ಶೇರಿಡೆನನಿಗೆ ಈ ಮಾತನ್ನು ಬರೆಯುವ ಪತ್ರದ ಸಂಗಡ ಅವನ ಹಣದ ಪ್ರಮಾಣಲೇಖವೊಂದನ್ನು ಬರೆದು ಕಳುಹಿದರಾಯಿತು ಎಂದು ಹೇಳಿ ಹಣವನ್ನು ಬಂದ ಅಂಗಡಿಕಾರನಿಗೆ ಕೊಟ್ಟನು.

ವಿಶ್ವಾಸಕ್ಕೆ ತಕ್ಕವರಾರೆಂಬ ಜನಪರೀಕ್ಷೆಯು ಇಲ್ಲದ ಕಾರಣದಿಂದಲೇ ನಮ್ಮ ದೇಶದ ಹಲವುಜನ ವ್ಯಾಪಾರಿಗಳು ದುರ್ಮುಖರಾಗಿ ತಮ್ಮ ವ್ಯಾಪಾರವನ್ನು ಮುಳುಗಿಸಿಕೊಳ್ಳುವರು. ಪರರ ಹಣವನ್ನು ಮುಳುಗಿಸುವುದಕ್ಕೆ ಹೇಸಿಕೊಳ್ಳುವ ಜನರು ನಮ್ಮ ದೇಶದಲ್ಲಿಯೂ ಹೆಚ್ಚಿಗೆ ಇರುವರು; ತನ್ನನ್ನು ನಂಬಿದವರನ್ನು ಕೆಡಿಸುವ ಜನರು ಎಲ್ಲಿಯೂ ವಿರಳ.

---

ಪ್ರೀತಿಯ ಮಹಿಮೆ

## ೩೩ ಶ್ರೀ ಈಶ್ವರಚಂದ್ರ ವಿದ್ಯಾಸಾಗರ.

ಒಂದಾನೊಂದು ದಿನ ಬಂಗಾಲದ ಸುಪ್ರಸಿದ್ಧ ವಿದ್ವಾಂಸನಾದ ವಿದ್ಯಾಸಾಗರ ಮಹಾಶಯನು ದಾರಿಯು ಹಿಡಿದು ಹೋಗುತ್ತಿರುವಾಗ ಒಬ್ಬ ಚಿಕ್ಕ ತಕ್ಕಡಿಯ ಅಂಗಡಿಕಾರನು ಆತನನ್ನು ಕರೆದನು. ವಿದ್ಯಾಸಾಗರನು ಹೋಗಿ ಅಂಗಡಿಯ ಕಟ್ಟೆಯ ಮೇಲೆ ಹಾಸಿದ ಚಾಪೆಯ ಮೇಲೆ ಕುಳಿತುಕೊಂಡು ಆತನೊಡನೆ ಮಾತಾಡುತ್ತಿದ್ದನು. ಆಗ ವಿದ್ಯಾಸಾಗರನ ಮೇಲೆ ಭಕ್ತಿಯುಳ್ಳ ಒಬ್ಬ ಶ್ರೀಮಂತನು ಕುದುರೆಯ ಗಾಡಿಯಲ್ಲಿ ಆ ದಾರಿಯು ಹಿಡಿದು ಹೋಗುತ್ತಿದ್ದನು. ವಿದ್ಯಾಸಾಗರನನ್ನು ಕಂಡ ಕೂಡಲೆ ವಾಡಿಕೆಯಂತೆ ಗಾಡಿಯು ನಿಲ್ಲಿಸಿ ಕೆಳಗಿಳಿದು ನಮಸ್ಕಾರ ಮಾಡಿ ಹೋಗಬೇಕೆಂದು ಬಯಸಿದನು. ಆದರೆ ಆ ಸಣ್ಣ ಅಂಗಡಿಕಾರನ ಎದುರಿಗೆ ಹಾಗೆ ಮಾಡುವುದಕ್ಕೆ ಸಂಕೋಚಪಟ್ಟು ಹಾಗೆಯೇ ಮುಂದೆ ಹೋದನು. ವಿದ್ಯಾಸಾಗರನನ್ನು ಕಂಡು ನಮಿಸಿ ಹೋಗಿದ್ದರೆ ಅದಕ್ಕೆ ಎಲ್ಲರೂ ಒಳ್ಳೆಯ ಕೆಲಸವೆಂದೇ ಹೇಳುತ್ತಿದ್ದರು. ಆದರೆ ಆ ಶ್ರೀಮಂತನು ತಾನು ಹಾಗೆ ಮಾಡಿದರೆ ಜನರು ಏನೆಂದಾರೆಂದು ಹೆದರಿದನು. ಆತನು ಜನರೆಂದರೆ ಇಂಗ್ರೇಜಿಯನ್ನು ಕಲಿತು ಬುನಾದಿಯ ಧರ್ಮವಿಚಾರಗಳನ್ನೂ ಹಿರಿಯರು ಕಿರಿಯರೆಂಬ ಮಾನಮರ್ಯಾದೆಗಳನ್ನೂ ತೊರೆದ ಲಘುಸ್ವಭಾವದ ತನ್ನ ಕೆಲ ಜನ ಗೆಳೆಯರೆಂದೇ ತಿಳಿದುಕೊಂಡಿದ್ದನು. ಆದದರಿಂದ ಸೇವಕನಿಗೆ ಗಾಡಿಯು ನಿಲ್ಲಿಸ ಹೇಳಿದ ಮುಂದಿನ ಕ್ಷಣದಲ್ಲಿಯೇ ಮತ್ತೆ ಮುಂದೆ ಹೊಡೆಯ ಹೇಳಿದನು.

ಸ್ಪಷ್ಟಭಾಷಿಯಾದ ವಿದ್ಯಾಸಾಗರ ಮಹಾಶಯನು ತನ್ನ ಬಳಿಗೆ ಆ ಗೃಹಸ್ಥನು ಮತ್ತೊಮ್ಮೆ ಬಂದಾಗ 'ಆ ದಿವಸ ಬಹಳ ತೊಂದರೆಗೊಳಗಾಗಿದ್ದಿರಿ; ಗಾಡಿಯಿಂದಿಳಿದು ನನ್ನ ಬಳಿಗೆ ಬರಬೇಕೆಂದಿದ್ದಿರಿ; ಆದರೆ ಅಂಗಡಿಕಾರನು ಅಡ್ಡಿಯಾದನು' ಎಂದು ಹೇಳಿದನು. ಆಗ ಆ ಶ್ರೀಮಂತನು—'ಸ್ವಾಮೀ, ಅಹುದು, ತಾವು ಕಂಡಕಡೆಯಲ್ಲಿ ಹಾಗೆ ಕುಳಿತುಕೊಂಡರೆ ನಮಗೆ ಸಂಕೋಚವಾಗ್ತವುದು' ಎಂದನು. ಅದಕ್ಕೆ ವಿದ್ಯಾಸಾಗರನು—ರಾಯರೇ, ನಮ್ಮ ಯಾವುದೊಂದು ಆಚರಣೆಯು ಪರರ ಸಂಕೋಚಕ್ಕೆ ಆಸ್ಪದವಾಗುವುದೆಂಬುದು ಬಹಳ ದುಃಖಕರವು; ನಮ್ಮೊಡನೆ ಸಂಬಂಧವನ್ನು ಬಿಟ್ಟರೆ ಈ ತೊಂದರೆಯೇ ಇಲ್ಲವಲ್ಲ? ಪ್ರೀತಿಯ ಮಹತ್ವದ ಜ್ಞಾನವು ಲೋಪಹೊಂದಿದವರ ಸಲುವಾಗಿ ನಾನು ಯಾವ ಬಂಧುವನ್ನೂ ಬಿಡಲಾರೆನು ಎಂದು ಹೇಳಿದನು.

---

ಅವಧಾನ.

## ೩೪ ನ್ಯೂಟನ್.

ಗುರುತ್ವಾಕರ್ಷಣಶಕ್ತಿಯ ದ್ವಿತೀಯ ಶೋಧಕನಾದ ನ್ಯೂಟನನು ಅರ್ಥ ಶಾಸ್ತ್ರದ ವಿಷಯವಾಗಿಯೂ ವಿಚಾರಮಾಡುತ್ತಿದ್ದನು. ವಿಚಾರಕ್ಕೆ ತೊಡಗಿದಾಗ ಬೇರೆ ಯಾವ ವಿಷಯವೂ ಅವನ ಚಿತ್ತಚಾಂಚಲ್ಯವನ್ನುಂಟುಮಾಡುತ್ತಿರಲಿಲ್ಲ.

ಒಮ್ಮೊಮ್ಮೆ ಆತನು ಉಡುಪನ್ನು ಧರಿಸುವಾಗ ಒಂದು ಕಾಲಿನ ಇಜಾರ ವನ್ನು ಹಾಕಿಕೊಂಡು ಅಷ್ಟರಲ್ಲಿಯೇ ಯಾವುದೊಂದು ಘನವಿಚಾರವು ಮನಸ್ಸಿ ನಲ್ಲಿ ಬಂದರೆ ಇನ್ನೊಂದು ಕಾಲಿನ ಇಜಾರವನ್ನು ಹಾಕಿಕೊಳ್ಳುವ ಲಕ್ಷವಿಲ್ಲದೆ ಆ ವಿಚಾರವನ್ನು ನಿರ್ಣಯಿಸುವ ವರೆಗೆ ಹಾಗೆಯೇ ೨-೩ ಘಂಟೆ ಕಾಲವನ್ನು ಕಳೆದುದೂ ಉಂಟು. ಹಲವು ವೇಳೆ ಊಟದ ಟೇಬಲಿನ ಮೇಲೆ ಬಡಿಸಿದ ಬಳಿಕ ಅವನು ಊಟಕ್ಕೆ ಬರುವುದು ೩-೪ ಘಂಟೆ ತಡವಾಗುತ್ತಿತ್ತು. ಒಂದು ದಿವಸ ಆತನ ಮಿತ್ರನಾದ ಡಾ. ಸ್ಟಕ್ಲಿಯು ಆತನ ಮನೆಗೆ ಬಂದನು. ಆಗ ನ್ಯೂಟನನು ತನ್ನ ಲಾಯಬ್ರರಿಯಲ್ಲಿ ವಿಚಾರಮಗ್ನನಾಗಿ ಕುಳಿತಿದ್ದನು. ಡಾ. ಸ್ಟಕ್ಲಿಯು ಭೋಜನಶಾಲೆಯಲ್ಲಿ ಆತನ ದಾರಿಯನ್ನು ನೋಡತೊಡಗಿದನು. ಬಹಳ ವೇಳೆ ಯಾದರೂ ನ್ಯೂಟನನು ಬರಲಿಲ್ಲ. ಅಲ್ಲಿ ನ್ಯೂಟನನ ಸಲುವಾಗಿ ಒಂದು ಎಡೆಯು ಬಡಿಸಲ್ಪಟ್ಟಿತ್ತು. ಡಾ. ಸ್ಟಕ್ಲಿಯು ಆ ಆಹಾರವನ್ನು ತಾನು ಭೋಜನ ಮಾಡಿ ಆ ಎಂಜಲ ಎಡೆಯನ್ನು ಮೊದಲಿನಂತೆ ಮುಚ್ಚಿ ಇಟ್ಟನು. ಸ್ವಲ್ಪ ಹೊತ್ತಿನ ತರುವಾಯ ನ್ಯೂಟನನು ಅಲ್ಲಿಗೆ ಬಂದು ತನ್ನ ಮಿತ್ರನನ್ನು ಕುರಿತು 'ನನಗೆ ಬಹಳ ಹಸಿವೆಯಾಗಿದೆ' ಎಂದು ಹೇಳಿ ಊಟದ ಎಡೆಯ ಮೇಲಿನ ಮುಚ್ಚಳವನ್ನು ತೆರೆದು ನೋಡಿದನು. ಅದು ಉಂಡ ಪಾತ್ರೆಯಾಗಿತ್ತು. ಆಗ ನ್ಯೂಟನನು ಸ್ವಲ್ಪ ನಕ್ಕು ಮಿತ್ರನನ್ನು ಕುರಿತು–ನಾನು ಭ್ರಮಿಸಿ ಊಟಮಾಡಿಲ್ಲ ವೆಂದು ತಿಳಿದುಕೊಂಡಿದ್ದೆನು; ನನ್ನ ಊಟವಾದಂತಿದೆ ಎಂದು ಹೇಳಿದನು!

ಇಂತಹ ಅವಧಾನದ ಬಲದಿಂದಲೇ ಆತನು ಗುರುತ್ವಾಕರ್ಷಣಶಕ್ತಿಯ ನಿಯಮಗಳನ್ನು ಕಂಡುಹಿಡಿದು ಶಾಸ್ತ್ರೀಯ ಜಗತ್ತಿನಲ್ಲಿ ಚಿರಸ್ಮರಣೀಯನಾಗಿ ರುವನು. ಈ ಅಸಾಧಾರಣ ವಿದ್ವಾಂಸನು—ನನಗೆ ಜ್ಞಾನಸಮುದ್ರದಲ್ಲಿ ಇನ್ನೂ ಪ್ರವೇಶವಿಲ್ಲ. ದಂಡೆಯ ಮೇಲಿನ ಹರಳುಗಳನ್ನು ಆರಿಸಿಕೊಂಡು ಬಾಲಕನಂತೆ ತಿರುಗಾಡುವವನಾಗಿದ್ದೇನೆ, ಎಂದು ಹೇಳುತ್ತಿದ್ದನು.

ಉಪನಿಷತ್ತಿನಲ್ಲಿ—ಯಾವನು ನಾನು ತಿಳಿದಿಲ್ಲವೆಂದು ತಿಳಿದಿರುವನೋ ಅವನೇ ಸ್ವಲ್ಪ ತಿಳಿದಿರುವನು ಎಂದು ಹೇಳಿದೆ.

---

ದೊಡ್ಡತನ.

## ೩೫ ಪ್ರಿನ್ಸ್ ವಸಿರುದ್ದೀನ್.

ಟಿಪ್ಪುಸುಲ್ತಾನನ ವಂಶದ ಪ್ರಿನ್ಸ್ ವಸಿರುದ್ದೀನನು ಚುಚುಡಾ ಎಂಬಲ್ಲಿ ಇರುತ್ತಿದ್ದನು. ಒಂದಾನೊಂದು ದಿವಸ ಮನೆಯ ಹೊರಗೆ ಅಂಗಳದ ಚೌಕಿನಲ್ಲಿ ಕುಳಿತುಕೊಂಡಿದ್ದನು. ಬಳಿಯಲ್ಲಿ ಚಿನ್ನದ ರಿಪಿಟರ್ ಗಡಿಯಾರವೂ ಸರಪಳಿಯೂ ನೆಲದಮೇಲೆ ಇದ್ದವು. ಆಹೊತ್ತಿಗೆ ಕೆಲವು ಜನ ಅಲ್ಲಿಯ ಮೊಗಲರು ಬಂದರು. ಎತ್ತರವಾಗಿ ಮುಂಡಾಸವನ್ನು ಸುತ್ತಿದ ಒಬ್ಬ ಮೊಗಲನು ಮಾತಾಡುತ್ತ ಬಹಳ ಹೊತ್ತು ಕುಳಿತುಕೊಂಡನು. ಪ್ರಿನ್ಸನು ಏತಕ್ಕೋ ಒಮ್ಮೆ ಮನೆಯೊಳಗೆ ಹೋಗಿ ತಿರುಗಿ ಅಲ್ಲಿಗೆ ಬಂದಾಗಲೂ ಆ ಮೊಗಲನು ಅಲ್ಲಿಯೇ ಕುಳಿತಿದ್ದನು. ಆತನು ಪ್ರಿನ್ಸನಿಗೆ ಸಲಾಂ ಮಾಡಿ ಹೋಗಿಬರುವೆನೆಂದು ಹೇಳಿ ಎದ್ದುನಿಂತಾಗ ಆತನ ಮುಂಡಾಸದೊಳಗಿಂದ ರಿಪಿಟರ್ ಗಡಿಯಾರವು ಟಂಗ್ ಎಂದು ಅರ್ಧ ಘಂಟೆಯನ್ನು ಬಾರಿಸಿತು. ಪ್ರಿನ್ಸನು ತನ್ನ ಗಡಿಯಾರವನ್ನಿಟ್ಟ ಸ್ಥಳದ ಕಡೆಗೆ ನೋಡಿದನು. ಅಲ್ಲಿ ಗಡಿಯಾರವಿರಲಿಲ್ಲ. ಆತನು ಕೂಡಲೆ ಮನೆಯೊಳಗೆ ಅವಸರ ದಿಂದ ಹೋದನು. ಅದೇ ಹೊತ್ತಿಗೆ ಆತನ ಮಗನಾದ ಪ್ರಿನ್ಸ್ ಅಮಿರುದ್ದೀನನು ಮನೆಯೊಳಗಿಂದ ಹೊರಗೆ ನಡೆದಿದ್ದನು. ಆಗ ಆ ಮೊಗಲನು ತನ್ನ ಮುಂಡಾ ಸದೊಳಗಿಂದ ಗಡಿಯಾರವನ್ನು ಹೊರದೆಗೆದು ಇಡುತ್ತಿದ್ದುದನ್ನು ಆತನು ನೋಡಿದನು. ಆತನು ಆ ಮೊಗಲನನ್ನು ಹಿಡಿಯಬೇಕೆಂದು ಧಾವಿಸುವಷ್ಟರಲ್ಲಿ ತಂದೆಯ ಅಸ್ಪಷ್ಟ ಶಬ್ದವನ್ನಾಲಿಸಿ ಹಿಂದಿರುಗಿ ನೋಡಿದನು. ತಂದೆಯು ಮೂಗಿನ ಮೇಲೆ ತರ್ಜನಿ ಬೆರಳನ್ನಿಟ್ಟುಕೊಂಡು ಕಣ್ಸನ್ನೆಮಾಡಿ ಸುಮ್ಮನೆ ಒಳಗೆ ಬರಲು ಸೂಚಿಸಿದನು. ಮಗನು ಒಳಗೆಬರಲು ಪ್ರಿನ್ಸ್‌ವಸಿರುದ್ದೀನನು 'ಆತನ ಮುಂಡಾಸದಲ್ಲಿ ಗಡಿಯಾರವು ಟಂಗ್ ಎಂದು ಘಂಟೆಹೊಡೆದುದನ್ನು ಕೇಳಿ ನಾನು ಆತನ ಮೋರೆಯ ಕಡೆಗೆ ನೋಡಿದಾಗ ಆತನ ಮೋರೆಯು ಕಪ್ಪಿಟ್ಟಿತ್ತು; ಮರಣವು ಸಮೀಪಿಸಿದಂತೆ ಆದ ಆತನ ಮೋರೆಯ ಕಳೆಯನ್ನು ಕಂಡು ನಾನು ಓಡಿ ಇತ್ತ ಬಂದೆನು' ಎಂದು ಹೇಳಿದನು.

---

ಪ್ರಾರಬ್ಧಮುತ್ತಮಜನಾ
ನ ಪರಿತ್ಯಜಂತಿ.

## ೩೬ ಟಾಮಸ್ ಕ್ಲಾರ್ಕ್‌ಸನ್.

ಕ್ರಿ. ೧೭೮೫ ನೆಯ ವರ್ಷಕ್ಕೆ ಮುಂಚೆ ದಾಸ (ಗುಲಾಮ)ರನ್ನಿಟ್ಟು ಕೊಂಡು ದುಡಿಯಿಸುವುದು ಅನ್ಯಾಯ್ಯವೆಂದು ಹಲವರು ತಿಳಿಯುತ್ತಿರಲಿಲ್ಲ. ಆ ವರೆಗೆ ವೆಸ್ಟ್ಇಂಡೀಜ್ ದ್ವೀಪಪುಂಜದಲ್ಲಿ ಯುರೋಪಿಯನರು ದಾಸರನ್ನು ಬೇಕಾದಂತೆ ದುಡಿಯಿಸುತ್ತಿದ್ದರು; ಮತ್ತು ಪ್ರತಿವರ್ಷ ಅವರು ಆಫ್ರಿಕೆಗೆ ಹೋಗಿ ಸಾವಿರಾರು ಸಿದ್ದಿಜನರನ್ನು ಹಿಡಿತಂದು ದಾಸರನ್ನಾಗಿ ಮಾರಾಟ ಮಾಡುತ್ತಿದ್ದರು.

ಆ ವರ್ಷ ಕೆಂಬ್ರಿಜದ ಒಂದು ವಿದ್ಯಾಲಯದವರು "ದಾಸರ ಮಾರಾಟವು ಯೋಗ್ಯವೇ" ಎಂಬ ವಿಷಯವನ್ನು ಕುರಿತು ನಿಬಂಧವನ್ನು ಬರೆದವರಲ್ಲೊಬ್ಬರಿಗೆ ಪಾರಿತೋಷಿಕವನ್ನು ಕೊಡುವೆವೆಂದು ಪ್ರಕಟಿಸಿದರು. ಆ ವಿದ್ಯಾಲಯದ ಟಾಮಸ್ ಕ್ಲಾರ್ಕ್‌ಸನ್ ಎಂಬ ವಿದ್ಯಾರ್ಥಿಯು ಈ ವಿಷಯದ ಜ್ಞಾನವನ್ನು ಹಲವು ಬಗೆಗಳಿಂದ ದೊರಕಿಸಿ ಬಹು ಪರಿಶ್ರಮಬಟ್ಟು ನಿಬಂಧವನ್ನು ಬರೆದನು. ಅವನ ನಿಬಂಧವು ಶ್ರೇಷ್ಠವೆಂದು ನಿರ್ಣಯವಾದುದರಿಂದ ಅವನು ಪಾರಿತೋಷಿಕವನ್ನು ಪಡೆದನು. ಅಂದಿನಿಂದ ಆತನು ದಾಸರ ವ್ಯಾಪಾರವನ್ನು ತನ್ನಿಂದ ನಿಲ್ಲಿಸಲಾದೀತೇ ಎಂದು ವಿಚಾರಮಾಡತೊಡಗಿದನು.

ಬಳಿಕ ಆತನು ಲಂಡನಕ್ಕೆ ಹೊರಟು ಬರುವಾಗ ದಾರಿಯಲ್ಲಿ ತಾನು ದಾಸರ ಮಾರಾಟವು ಅನ್ಯಾಯ್ಯವಾದುದೆಂದು ನಿಬಂಧದಲ್ಲಿ ನಿರ್ಣಯಿಸಿದುದು ವಾಸ್ತವವೇ ಎಂದು ಆಲೋಚಿಸತೊಡಗಿದನು. ಎಲ್ಲ ಬಗೆಯಿಂದ ವಿಚಾರ ಮಾಡಿ ಕೊನೆಗೆ ಆತನು ತನ್ನ ಮತವು ನ್ಯಾಯ್ಯವಾದುದೆಂದು ಮನಗಂಡನು. ಲಂಡನಕ್ಕೆ ಬಂದ ಬಳಿಕ ಆತನು ತನ್ನಾ ನಿಬಂಧವನ್ನು ಮುದ್ರಿಸಿ ಪ್ರಸಾರಗೊಳಿಸಿದನು. ಹಲವರು ಆತನ ಮತವನ್ನು ಅನುಮೋದಿಸಿದರು. ಬಳಿಕ ಕ್ಲಾರ್ಕ್‌ಸನನು ಬರಿಯ ನಿಬಂಧದ ಪ್ರಸಾರದಿಂದ ತನ್ನ ಕಾರ್ಯವು ಕೊನೆಗಾಣದೆಂದೂ, ತಾನು ಈ ಕೆಲಸಕ್ಕೆ ಇನ್ನು ತನ್ನ ಜೀವನವನ್ನೇ ಅರ್ಪಿಸಬೇಕೆಂದೂ ನಿರ್ಧರಿಸಿ ಕೊಂಡನು.

ಕೆಲವು ದಿವಸಗಳ ತರುವಾಯ ಕ್ಲಾರ್ಕಸನನು ದಾಸರ ವ್ಯಾಪಾರವನ್ನು ನಿಲ್ಲಿಸುವುದಕ್ಕೆ ಪ್ರಯತ್ನಬಡುವ ದೊಡ್ಡ ಮನುಷ್ಯರ ಒಂದು ಸಂಘವನ್ನು ಸ್ಥಾಪಿಸಿದನು. ಈ ಸಂಘದವರು ಸಭೆಗಳನ್ನು ನೆರೆಯಿಸಿ ದಾಸರ ದುರ್ದಶೆಯನ್ನು ಯಥಾರ್ಥವಾಗಿ ವರ್ಣಿಸಿ ಆ ವ್ಯಾಪಾರವು ಎಷ್ಟುಮಟ್ಟಿಗೆ ಅನುಚಿತವೆಂಬುದನ್ನು ಜನರಿಗೆ ಬೋಧಿಸತೊಡಗಿದರು. ಇದರಿಂದ ಬಹುಜನರು ದಾಸರ ವ್ಯಾಪಾರದ ವಿರೋಧಿಗಳಾದರು. ಕ್ಲಾರ್ಕಸನನು ಈ ಸಂಘದ ಕಾರ್ಯದರ್ಶಿಯಾಗಿದ್ದು ಮಾಡಿದ ಅವಿಶ್ರಾಂತಪರಿಶ್ರಮದಿಂದ ಆತನ ಪ್ರಕೃತಿಯು ಅಸ್ವಸ್ಥವಾಯಿತು. ಆತನ ಕಿವಿಗಳು ಕಿವುಡಾದುವು; ಧ್ವನಿಯು ಕುಗ್ಗಿತು; ಸ್ಮರಣಶಕ್ತಿಯು ಕುಂದಿತು. ಇದರಿಂದ ಆತನು ಈ ಕೆಲಸವನ್ನು ಬಿಟ್ಟು ಕೆಲವು ದಿವಸ ವಿಶ್ರಾಂತಿಯನ್ನು ಹೊಂದಬೇಕಾಯಿತು. ಮುಂದೆ ಆತನ ಪ್ರಕೃತಿಯು ಸ್ವಸ್ಥವಾಗುವುದಕ್ಕೆ ಎಂಟುವರ್ಷಗಳು ಹಿಡಿದುವು.

ಕ್ಲಾರ್ಕಸನನು ಮತ್ತೆ ತನ್ನ ಜೀವನವ್ರತವನ್ನು ಹಿಡಿದನು. ಈ ಸಮಯದಲ್ಲಿ ದಾಸರ ವ್ಯಾಪಾರದಿಂದ ಲಾಭ ಹೊಂದುತ್ತಿರುವ ಹಲವರು ಕ್ಲಾರ್ಕಸನನನ್ನು ಹಲವು ಬಗೆಗಳಿಂದ ಪೀಡಿಸಿದರು. ಹಲವು ಬಾರಿ ಆತನಿಗೆ ಪ್ರಾಣಸಂಕಟ ಪ್ರೊದಗಿತ್ತು. ಈ ಎಲ್ಲ ತೊಂದರೆಅಡ್ಡಿಗಳನ್ನು ನೀಗಿ ಕ್ಲಾರ್ಕಸನನು ತನ್ನ ಕಾರ್ಯದಲ್ಲಿ ಜಯಶಾಲಿಯಾದನು.

ಕ್ರಿ. ೧೮೦೭ ನೆಯ ಇಸವಿಯಲ್ಲಿ ಬ್ರಿಟಿಶ್‌ಪಾರ್ಲಿಮೆಂಟಿನವರು ತಮ್ಮ ವಶದಲ್ಲಿರುವ ರಾಜ್ಯದಲ್ಲೆಲ್ಲ, ದಾಸರ ವ್ಯಾಪಾರವನ್ನು ನಿಲ್ಲಿಸಿದ ನಿರ್ಣಯವನ್ನು ಪ್ರಕಟಿಸಿದರು. ಬ್ರಿಟಿಶ್ ಸರಕಾರದ ಈ ನಿರ್ಣಯವನ್ನು ನೋಡಿ ಯುರೋಪದ ಬೇರೆ ದೇಶಗಳೂ ಕೆಲವು ವರ್ಷಗಳಲ್ಲಿ ತಂತಮ್ಮ ವಶದಲ್ಲಿರುವ ಪ್ರದೇಶಗಳಲ್ಲಿ ದಾಸರ ವ್ಯಾಪಾರವನ್ನು ನಿಲ್ಲಿಸಿದರು. ಹೀಗೆ ಕೆಲವು ವರ್ಷಗಳಲ್ಲಿ ದಾಸರ ವ್ಯಾಪಾರವು ಜಗತ್ತಿನಲ್ಲಿ ಇಲ್ಲದಂತಾಯಿತು. ೨೦ ವರ್ಷಗಳ ಹಿಂದೆ ದಾಸರ ವ್ಯಾಪಾರವನ್ನು ಮುರಿಯುವುದು ಆಕಾಶಕುಸುಮದಂತೆ ಅಸಂಭವನೀಯವಾಗಿ ತೋರುತ್ತಿತ್ತು. ಆದರೆ ಟಾಮಸ್ ಕ್ಲಾರ್ಕಸನನ ಅಮೋಘವಾದ ಪ್ರಯತ್ನದಿಂದ ೧೮೦೭ರ ತರುವಾಯ ದಾಸರೇ ಆಕಾಶಕುಸುಮದಂತೆ ಕಾಣಿಸದಂತಾದರು.

ಮಾನವಜಾತಿಯ ದುಃಖವನ್ನು ಕಡಿಮೆ ಮಾಡಿ ಕೀರ್ತಿಪಡೆದ ಮಹಾತ್ಮರಲೊಬ್ಬನೆಂದು ಹೆಸರಾದ ಟಾಮಸ್ ಕ್ಲಾರ್ಕಸನನ ಮನೋದಾರ್ಢ್ಯವೂ ವಿಶಾಲಬುದ್ಧಿಯೂ ಶ್ಲಾಘ್ಯವಾದುವು.

---

ಮನಸ್ಸಿನ ದೊಡ್ಡತನ.

## ೩೨ ಕ್ಯಾಲೆಯ ನಾಗರಿಕರೂ, ಫಿಲಿಪ್ಪಾ ರಾಣಿಯೂ.

ಇಂಗ್ಲಂಡದ ಅರಸು ೩ನೆಯ ಎಡ್ವರ್ಡನ ಆಳಿಕೆಯಲ್ಲಿ ಇಂಗ್ಲಂಡ್ ಫ್ರಾನ್ಸ ಗಳ ನಡುವೆ ಯುದ್ಧವು ನಡೆದಿತ್ತು. ಆಗ ಎಡ್ವರ್ಡನು ಫ್ರಾನ್ಸದ ಕ್ಯಾಲೆ ಎಂಬ ಕೋಟೆಗೆ ಸುಮಾರು ಒಂದು ವರ್ಷ ಮುತ್ತಿಗೆಯನ್ನು ಹಾಕಿದ್ದನು. ಆದರೂ ಕೋಟೆ ವಶವಾಗಲಿಲ್ಲ. ಆತನ ಸೈನಿಕರು ಮಾತ್ರ ಹಲವರು ಸಾವಿನ ಬಾಯಿಗೆ ತುತ್ತಾದರು. ಆದುದರಿಂದ ಎಡ್ವರ್ಡರಾಜನು ಕ್ಯಾಲೆಯ ಜನರನ್ನು ಕುರಿತು ಉರಿದೆದ್ದನು. ಕೊನೆಗೆ ಆಹಾರಸಾಮಗ್ರಿಯ ಕೊರತೆಯಾಗಲು ಕೋಟೆಯೊಳಗಿನ ಜನರು ಶರಣಾಗತರಾದರು. ಆಗ ಎಡ್ವರ್ಡನು—ನೀವು ನಿಮ್ಮೆಲ್ಲರ ಜೀವಿತದ ಮತ್ತು ಆಸ್ತಿಯ ಹೊಣೆಗಾರಿಕೆಯನ್ನು ನನ್ನ ಮೇಲೆ ಎಷ್ಟುಮಾತ್ರವೂ ಇಡದೆ ಕೋಟೆಯನ್ನೊಪ್ಪಿಸಿದರೆ ನನ್ನದೇನೂ ಅಡ್ಡಿಯಿಲ್ಲ, ಎಂದು ಹೇಳಿದನು. ಇಷ್ಟೊಂದು ಕಠೋರವಾದ ಆದೇಶಕ್ಕೆ ಆತನ ಸೇನಾಪತಿಗಳು ಕೂಡ ಹೇಸಿದರು. ಆದುದರಿಂದ ಎಡ್ವರ್ಡನು ಸ್ವಲ್ಪ ದಯೆದೋರಿ —ಕ್ಯಾಲೆಪಟ್ಟಣದೊಳಗಿನ ಆರುಜನ ಮುಂದಾಳುಗಳು ಒಂದೇ ಅಂಗಿಯ ತೊಟ್ಟುಕೊಂಡು ನಿಃಶಸ್ತ್ರರಾಗಿ ಕೊರಳಿಗೆ 'ಫಾಸಿ' ಹಾಕುವ ಹಗ್ಗವನ್ನು ಸುತ್ತಿಕೊಂಡು ನನ್ನೆದುರಿಗೆ ಬಂದು ನಿಲ್ಲಬೇಕು, ಕೋಟೆಯ ಎಲ್ಲ ಬೀಗದ ಕೈಗಳನ್ನು ನನ್ನ ವಶಕ್ಕೆ ಕೊಡಬೇಕು, ಮತ್ತು ಆ ಆರುಜನರಿಗೆ ನಾನು ಬೇಕಾದ ಶಿಕ್ಷೆಯನ್ನು—ಮರಣಶಿಕ್ಷೆಯನ್ನು ಕೂಡ ಕೊಡಬಹುದು. ಈ ಮಾತುಗಳಿಗೊಪ್ಪಿಕೊಂಡರೆ, ಉಳಿದವರಿಗೆ ಜೀವದಾನವನ್ನು ಕೊಡುವೆನು ಎಂದು ವಿಧಿಸಿದನು. ಈ ವಿಧಾನಗಳನ್ನು ಕೇಳಿ ಕೋಟೆಯೊಳಗಿನ ಜನರೆಲ್ಲ ಚಿಂತಾಕುಲರಾದರು. ಏಕೆಂದರೆ, ತಮ್ಮ ಜೀವವನ್ನು ಕೊಡಲು ಸಿದ್ಧರಾಗುವ ಆರು ಜನರು ಹೇಗೆ ದೊರೆಯಬೇಕು? ಕೊನೆಗೆ ಯೂಸ್ಟೆಸ್ ಡಿ ಸೆಂಟ ಪೀರೀ ಎಂಬ ಒಬ್ಬ ಗೃಹಸ್ಥನು ಮುಂದೆ ಬಂದು ನೆರೆದ ಜನರನ್ನುದ್ದೇಶಿಸಿ—ಎಲೈ ನಾಗರಿಕರೇ, ಈ ಸಂಕಟಸಮಯದಲ್ಲಿ ಈ ಸುಂದರವಾದ ಕ್ಯಾಲೇಪಟ್ಟಣದ ರಕ್ಷಣೆಗಾಗಿ ಜೀವವನ್ನು ಕೊಡಬಲ್ಲ ಮನುಷ್ಯನು ದೇವರ ಕೃಪೆಗೆ ಪಾತ್ರನಾಗುವನೆಂಬ ವಿಷಯದಲ್ಲಿ ಸಂಶಯವಿಲ್ಲ. ಈ ಮಾತನ್ನು ಪರೋಪದೇಶಕ್ಕಾಗಿ ಆಡುವೆನೆಂದು ಬಗೆಯಬೇಡಿರಿ; ಕ್ಯಾಲೇಪಟ್ಟಣದ ರಕ್ಷಣಕ್ಕಾಗಿ ಇಂಗ್ಲಂಡದ ಅರಸನಿಗೆ ಕಾಣಿಕೆಕೊಡಬೇಕಾದ ಆರು ತಲೆಗಳಲ್ಲಿ ನನ್ನ ತಲೆಯು ಮೊದಲನೆಯದೆಂದು ತಿಳಿಯಿರಿ ಎಂದು ಆವೇಶದಿಂದ ನುಡಿದನು.

ಪೀರಿಯ ಮಾತುಗಳನ್ನು ಕೇಳಿ ಸ್ವದೇಶಾಭಿಮಾನದಿಂದ ಪ್ರೇರಿತರಾದ ಇನ್ನೈ ವರು, ಬಂದುದನ್ನನುಭೋಗಿಸುವುದಕ್ಕೆ ಸಿದ್ಧರಾಗಿ ಮುಂದೆ ಬಂದರು. ಎಡ್ವರ್ಡ ರಾಜನು ವಿಧಿಸಿದಮೇರೆಗೆ ಅವರು ವೇಷವನ್ನು ಹಾಕಿಕೊಂಡರು. ಸಾರ್ವ ಭೌಮನ ಓಲಗದಲ್ಲಿ ಪಡೆಯುವ ಮನ್ನಣೆಗಿಂತ ಆ ಕಾಲದಲ್ಲಿ ಅವರಿಗೆ ದೊರೆತ ಮನ್ನಣೆಯು ಮೇಲಾದುದೆಂಬ ವಿಷಯದಲ್ಲಿ ಸಂಶಯವಿಲ್ಲ. ಈ ಆರು ಜನರು ಕೋಟೆಯ ಹೊರಗೆ ಬಂದು ಎಡ್ವರ್ಡರಾಜನ ಎದುರಿಗೆ ಕೈಕಟ್ಟಿಕೊಂಡು ನಿಂತರು. ಅರಸನು ಅವರನ್ನು ತಿರಸ್ಕಾರದೃಷ್ಟಿಯಿಂದ ನೋಡಿ—ನೀವು ಹಠ ಹಿಡಿದು ಕೋಟೆಯನ್ನು ಮೊದಲೇ ಒಪ್ಪಿಸದೆ ನನ್ನನ್ನು ಬಹಳ ಹಾನಿಗೀಡು ಮಾಡಿದಿರಿ. ಈ ಮೇರೆಗೆ ಹೀಯಾಳಿಸಿ ಹಲವು ಮಾತುಗಳನ್ನಾಡಿ ಕೂಡಲೆ ಇವರನ್ನು ಶೂಲಕ್ಕೇರಿಸಿರೆಂದು ತನ್ನಾಳುಗಳಿಗೆ ಅಪ್ಪಣೆ ಮಾಡಿದನು. ಆಗ ಎಡ್ವ ರ್ಡನ ಸೇನಾಪತಿಗಳೂ ಪ್ರತ್ಯಕ್ಷ ಯುವರಾಜನೂ ( ಪ್ರಿನ್ಸ್ ಆಫ್‌ವೇಲ್ಸ್,) ಈ ಆರು ಜನರಿಗೆ ಜೀವದಾನ ಕೊಡಬೇಕೆಂದು ಅರಸನನ್ನು ಕುರಿತು ಬಹುವಾಗಿ ಬೇಡಿಕೊಂಡರು. ಅರಸನು ಯಾರ ಮಾತಿಗೂ ಕಿವಿಗೊಡಲಿಲ್ಲ.

ಎಡ್ವರ್ಡರಾಜನ ಹೆಂಡತಿ ಫಿಲಿಪ್ಪಾರಾಣಿಯು ಈ ಆರುಜನರು ತೋರಿ ಸಿದ ಸ್ವದೇಶಾಭಿಮಾನಕ್ಕೂ ಮನಸ್ಸಿನ ದೊಡ್ಡತನಕ್ಕೂ ಮೆಚ್ಚಿ ಅವರಿಗೊದಗಿದ ದುರವಸ್ಥೆಗೆ ಕನಿಕರಬಟ್ಟು ಹೇಗಾದರೂ ಇವರನ್ನು ಬದುಕಿಸಬೇಕೆಂದು ನಿರ್ಧರಿ ಸಿದಳು.

ಫಿಲಿಪ್ಪಾರಾಣಿಯು ದಯಾಶಾಲಿನಿಯೆಂದು ಹೆಸರಾದವಳು. ಆಕೆಯು ಇಂಗ್ಲಂಡದಿಂದ ರಾಜನ ಪಾಳಯಕ್ಕೆ ಅದೇ ಆಗ ಬಂದಿದ್ದಳು. ಇದಲ್ಲದೆ ಆಕೆಯು ಭಾಗ್ಯಶಾಲಿನಿಯೆಂದೂ, ಹೆಸರಾಗಿದ್ದಳು. ಏಕೆಂದರೆ, ಆಕೆಯು ರಾಜ್ಯ ಕಾರಭಾರವನ್ನು ಮಾಡುತ್ತಿದ್ದಾಗ ಇಂಗ್ಲಂಡಕ್ಕೆ ಹಲವು ಜಯಗಳು ದೊರೆತಿ ದ್ದುವು. ಇದಲ್ಲದೆ ಆಗ ಆಕೆಯು ಬಸಿರಿಯಾಗಿದ್ದಳು. ಈ ಕಾರಣಗಳಿಂದ ಆಕೆಯು ಮಾತು ನಡೆಯುವ ಸಂಭವವಿತ್ತು. ತನ್ನ ಮಾತಿನ ಹೊರತು ಅರಸನ ಮನಸ್ಸು ಕರಗುವುದಿಲ್ಲವೆಂದರಿತು ಆ ದಯಾವತಿಯು ಅರಸನಲ್ಲಿಗೆ ಬಂದು ಕಣ್ಣೀ ರಿತ್ತಿ ತಲೆವಾಗಿ—ಮಹಾರಾಜರೇ, ತಮ್ಮ ದರ್ಶನಕ್ಕಾಗಿ ಸಮುದ್ರಪ್ರವಾಸದ ಕಷ್ಟವನ್ನು ತಾಳಿಕೊಂಡು ಇಲ್ಲಿಯ ವರೆಗೆ ಬಂದೆನು. ತಾವು ನನ್ನದೊಂದು ಮಾತನ್ನು ನಡೆಸಿಕೊಡಬೇಕೆಂದು ಕೇಳಿಕೊಳ್ಳುವೆನು; ನಾನು ಈ ಆರುಜನ

ದುರ್ದೈವಿಗಳ ದುರವಸ್ಥೆಯನ್ನು ನೋಡಲಾರೆನು; ದಯೆಯಿಟ್ಟು ನನ್ನ ಸಲು ವಾಗಿ ಇವರಿಗೆ ಪ್ರಾಣದಾನ ಕೊಡಿರಿ; ಇದರಿಂದ ತಮ್ಮ ಔದಾರ್ಯದ ಕೀರ್ತಿಯು ಲೋಕದಲ್ಲಿ ಹರಡುವುದು. ಎಂದು ಬೇಡಿಕೊಂಡಳು.

ಆಗ ಎಡ್ವರ್ಡ್‌ರಾಜನು ಕೆಲವು ವೇಳೆ ಸುಮ್ಮನಿದ್ದು ಕೊನೆಗೆ—ಪ್ರಿಯೇ, ಈ ದಿವಸ ನೀನು ಇಲ್ಲಿ ಇಲ್ಲದಿದ್ದರೆ ಒಳ್ಳೆಯದಾಗುತ್ತಿತ್ತು. ಆಗಲಿ, ದೈವಯೋಗವಿದ್ದಂತಾಗಲಿ; ಈ ಆರುಜನರನ್ನು ನಿನ್ನ ವಶಕ್ಕೆ ಕೊಟ್ಟಿದ್ದೇನೆ; ನಿನ್ನ ಮನಸ್ಸು ಒಪ್ಪಿದಂತೆ ಮಾಡು ಎಂದು ನುಡಿದನು.

ಆಗ ರಾಣಿಯು ಆ ಆರುಜನರನ್ನು ಸಂಮಾನದಿಂದ ಕರೆದೊಯ್ದು ಅವರಿಗೆ ತಕ್ಕ ಉಡುಗೊರೆಗಳನ್ನೂ ಕೆಲವು ಪಾರಿತೋಷಿಕಗಳನ್ನೂ ಕೊಟ್ಟು ಅವರನ್ನು ಮರಳಿ ಕಳುಹಿದಳು.

ಫಿಲಿಪ್ಪಾರಾಣಿಯ ಈ ದೊಡ್ಡತನವನ್ನು ಇಂಗ್ಲಿಶಸೈನಿಕರೂ, ವೈರಿಗಳಾದ ಫ್ರೆಂಚಸೈನಿಕರೂ ಬಹಳ ಕೊಂಡಾಡಿದರು.

---

ಮಾನವಪ್ರೇಮು.

## ೩೮ ರೋಮುಪಟ್ಟಣದ ಒಬ್ಬ ಸೊಸೆ.

ಯೇಸುಕ್ರಿಸ್ತನು ಪಶ್ಚಿಮದೇಶಗಳಲ್ಲಿ ಧರ್ಮಪ್ರಸಾರಮಾಡಿದ ಕೆಲವು ಶತಾಬ್ದಿಗಳ ತರುವಾಯ ಜನರಲ್ಲಿ ಧರ್ಮಭಾವನೆಯು ಎಂತು ನೆಲಸಿರುವುದೆಂಬುದನ್ನು ನೋಡಲು ಬಯಸಿ ಒಂದುದಿನ ಪಾದ್ರಿಯವೇಷದಿಂದ ರೋಮುಪಟ್ಟಣದಲ್ಲಿ ಅತ್ತಿತ್ತ ಸುಳಿದಾಡುತ್ತ ಹೊರಟನು.

ರೋಮುಪಟ್ಟಣದ ವಿಶಾಲವಾದ ಬೀದಿಯಲ್ಲಿ ಶ್ರೀಮಂತರ ಮನೆಯೊಂದು ಕಂಗೊಳಿಸುತ್ತಿತ್ತು. ಈ ದಿನ ಆ ಮನೆಯಲ್ಲಿ ಶೋಕದ ಕೋಲಾಹಲವೆದ್ದಿದೆ. ಮನೆಯೊಡೆಯನ ಹಿರಿಯ ಮಗನು ಎಡಹಿ ಬಿದ್ದು ಸತ್ತು ಹೋದನು. ತಂದೆ ತಾಯಿಗಳು ಬಂಧು ಬಾಂಧವರು, ಹೆಣ್ಣುಮಕ್ಕಳು ಸೊಸೆ ಇವರೆಲ್ಲರು ಕಲ್ಲು ಕರಗುವಂತೆ ಶೋಕಮಾಡುತ್ತಿರುವುದನ್ನು ಪಾದ್ರಿಯವೇಷದ ಕ್ರಿಸ್ತನು ಕಂಡು ಆ ಮನೆಯನ್ನು ಹೊಕ್ಕನು. ಪಾದ್ರಿಯು ಅಳುವವರನ್ನೆಲ್ಲ ಕುರಿತು—ಈ ದಿನ ಈ ಮನೆಯಿಂದ ಒಂದು ಜೀವವು ದೇವರಿಗೆ ಬೇಕಾಗಿದೆ; ಈ ಮೃತನು ಬದುಕಬೇಕೆಂದು ನೀವು ಬಯಸುತ್ತಿದ್ದರೆ ನಿಮ್ಮಲ್ಲಿ ಒಬ್ಬರು ಸಾಯಲು ಸಿದ್ಧರಾಗಿರಿ;

ನಾನು ಈಗಲೇ ಈತನನ್ನು ಬದುಕಿಸುವೆನು. ಈ ಮೃತನು ಎದ್ದೊಡನೆ ಸಾಯಲು ಸಿದ್ಧರಾದವರ ಪ್ರಾಣವು ಹಾರಿ ಹೋಗುವುದು ಎಂದು ನುಡಿದನು.

ಬಂಧು ಬಾಂಧವರು, ಹೆಣ್ಣುಮಕ್ಕಳು, ನೆರೆಹೊರೆಯವರು ಮೊದಲಾದವರ ಸಂದಣಿಯು ಒಮ್ಮೆಲೆ ಬಯಲಾಯಿತು. ಮೃತನ ತಂದೆ ತಾಯಿಗಳು, ಹೆಂಡತಿ ಈ ಮೂವರು ಮಾತ್ರ ಪ್ರೇತದ ಬಳಿಯಲ್ಲುಳಿದರು. ಆಗ ಮೃತನ ತಂದೆಯು—ನಾನು ಸಾಯಬಹುದಾಗಿತ್ತು. ಆದರೆ ನನ್ನ ಹೆಂಡತಿ ಚಿಕ್ಕವಳು. ಕಿರಿಯ ಮಗನ ವಿದ್ಯಾಭ್ಯಾಸವಿನ್ನೂ ಮುಗಿದಿಲ್ಲ. ಮೃತನು ಬದುಕಿದರೂ ಮನೆತನವನ್ನು ಸಾಗಿಸುವಷ್ಟು ಪ್ರೌಢನಾಗಿಲ್ಲ; ಆದುದರಿಂದ ನಾನು ಸಾಯಲಾರೆನು ಎಂದನು.

ಬಳಿಕ ತಾಯಿಯು—ನಾನು ಸಾಯಬಹುದಾಗಿತ್ತು. ಆದರೆ ನಾನಿಲ್ಲದಿದ್ದರೆ ಮುಪ್ಪಿನಲ್ಲಿ ಯಜಮಾನರ ಗತಿಯೇನಾದೀತು? ಈ ನನ್ನ ಕಿರಿಯ ಮಗನನ್ನು ಸಾಕಿಸಲಹಿ ಯಾರು ದೊಡ್ಡವನನ್ನು ಮಾಡಿಯಾರು? ಆದುದರಿಂದ ನಾನು ಸಾಯಲಾರೆನು ಎಂದಳು.

ಸೊಸೆಯು ಮುಂದೆಬಂದು—ತಂದೆಯೇ, ನಾನು ತಮ್ಮ ಮುಂದೆ ದೇವರೆದುರಿಗೆ ನುಡಿಯುವಂತೆ ನಿಜವನ್ನು ನುಡಿಯುವೆನು, ನಾನು ಪತಿಯು ಬದುಕಬೇಕೆಂಬುದನ್ನು ಮನಸ್ಸಿನಿಂದ ಬಯಸುತ್ತೇನೆ. ಆದರೆ ನನಗೆ ಪತಿಯ ಜೀವವು ನನ್ನ ಸಲುವಾಗಿ ಬೇಕಾಗಿದೆ, ನಾನು ಪತಿಯೊಡನೆ ಬಾಳುವೆ ಮಾಡಬೇಕೆಂದು ಪತಿಯನ್ನಪೇಕ್ಷಿಸುತ್ತೇನೆ; ನಾನಿಲ್ಲದ ಮರುದಿನ ಪತಿಯು ಇದ್ದರೇನು ಇಲ್ಲದಿದ್ದರೇನು? ಆದುದರಿಂದ ತಂದೆಯೇ, ತಾವು ದಯೆಯಿಟ್ಟು ನನ್ನ ಪತಿಯನ್ನು ಬದುಕಿಸುವುದಾದರೆ ನಾನು ಸಾಯದಂತಿದ್ದರೆ ಮಾತ್ರ ಬದುಕಿಸಿರಿ; ಇಲ್ಲವಾದರೆ ಬೇಡ ಎಂದು ನುಡಿದಳು.

ಕ್ರಿಸ್ತನು ಸೊಸೆಯ ಮಾತಿಗೆ ಮೆಚ್ಚಿದನು. ನಿಜವನ್ನಾಡುವ ವ್ಯಕ್ತಿಯೊಂದಾದರೂ ಕಾಣಿಸಿತಲ್ಲಾ ಎಂದು ಹರುಷಬಟ್ಟು ಆ ಮೃತನನ್ನು ಬದುಕಿಸಿದನು.

ಈ ಅದ್ಭುತವಾದ ದೃಶ್ಯವನ್ನು ಕಂಡು, ಪತಿಯು ಬದುಕುವುದಕ್ಕಾಗಿ ಆತ್ಮಬಲಿಯನ್ನರ್ಪಿಸುವ ಸ್ವರ್ಗೀಯ ಪ್ರೇಮದ ಪತ್ನಿಯು ತನ್ನ ಧರ್ಮಸಾಮ್ರಾಜ್ಯದಲ್ಲಿ ಉದಯಿಸುವಳೇ ಎಂದು ಇನ್ನೂ ಕ್ರಿಸ್ತನು ಗುಪ್ತವೇಷದಿಂದ ನಿರೀಕ್ಷಿಸುತ್ತಲಿರುವನೆಂದು ರೋಮದ ಜನರು ಬಹುಕಾಲ ಆಡಿಕೊಳ್ಳುತ್ತಿದ್ದರು.

---

ಅಧಿಕಾರಮದ. **೩೯ ಅಮೇರಿಕದ ಕರ್ಪೋರಾಲ್.**

ಅಮೇರಿಕವು ಸ್ವಾತಂತ್ರ್ಯಕ್ಕಾಗಿ ಮಾಡಿದ ಯುದ್ಧದ ಸಮಯದಲ್ಲಿ ಒಬ್ಬ ಅಮೇರಿಕದ ಕರ್ಪೋರಾಲನು ಕೆಲವು ಸೈನ್ಯದ ನಾಯಕನಾಗಿ ಒಂದು ಸ್ಥಳದಲ್ಲಿ ಕೋಟೆಯನ್ನು ಸರಿಪಡಿಸಿಕೊಳ್ಳುವ ಕೆಲಸವನ್ನು ಮಾಡುತ್ತಿದ್ದನು. ಅಲ್ಲಿ ಒಂದು ದೊಡ್ಡ ತೊಲೆಯನ್ನೆತ್ತಿ ಮೇಲೆ ಇಡುವುದರಲ್ಲಿ ಆತನ ಸೈನಿಕರು ತೊಡಗಿದ್ದರು. ಆದರೆ ತೊಲೆಯು ಬಹಳ ದೊಡ್ಡದಿದ್ದುದರಿಂದ ಎತ್ತುವುದು ಶಕ್ಯವಾಗಲೊಲ್ಲದು.

ಸಭ್ಯವೇಷದ ಗೃಹಸ್ಥನೊಬ್ಬನು ಕುದುರೆಯನ್ನೇರಿ ಆ ದಾರಿಯ ಹಿಡಿದು ಹೋಗುತ್ತಿದ್ದನು. ಕರ್ಪೋರಾಲನು ಹುಕುಮನ್ನು ಮಾತ್ರ ಕೊಡುತ್ತಾನೆಯೇ ಹೊರತು ತಾನು ಆ ಕೆಲಸಕ್ಕೆ ಕೈಯ ಹತ್ತಿಸಲೊಲ್ಲನು. ಇದನ್ನು ನೋಡಿ ಆ ಗೃಹಸ್ಥನು—ತೊಲೆಯು ಬಹಳ ದೊಡ್ಡದಿದೆ; ತಾವೂ ಸ್ವಲ್ಪ ನೆರವಾಗ ಬೇಡವೇ ಎಂದನು. ಕರ್ಪೋರಾಲನು ಬೆರಗಾಗಿ ಹೆಮ್ಮೆಯ ದನಿಯಿಂದ—ಮಹಾಶಯನೇ, ನಾನು ಕರ್ಪೋರಾಲನು! ಎಂದು ಹೇಳಿದನು. ಬಂದ ಗೃಹಸ್ಥನು—ನಿಜ; ನನ್ನ ತಪ್ಪನ್ನು ಕ್ಷಮಿಸಿರಿ; ಎಂದು ನುಡಿದನು; ಮತ್ತು ಆ ಮಹಾಮಾನ್ಯನು (!) ಟೊಪ್ಪಿಗೆಯನ್ನೆತ್ತಿ 'ಸಲಾಂ' ಮಾಡಿ ಕುದುರೆಯಿಂದ ಕೆಳಗಿಳಿದನು. ಬಳಿಕ ಕೋಟನ್ನು ಕಳೆದು ಶರ್ಟಿನ ತೋಳನ್ನು ಮೇಲಕ್ಕೇರಿಸಿ ತೊಲೆಯನ್ನೆತ್ತುವ ಕೆಲಸದಲ್ಲಿ ಸೈನಿಕರಿಗೆ ನೆರವಾದನು. ಶ್ರಮದಿಂದ ಆತನ ಮೈಯೆಲ್ಲ ಬೆವತಿತು. ಆದರೂ ಆತನು ತೋರಿಸಿದ ಉತ್ಸಾಹದಿಂದ ಸೈನಿಕರೆಲ್ಲ ಹುರುಪುಗೊಂಡು ಒಮ್ಮೆಲಿ ಸಂಪೂರ್ಣ ಬಲವನ್ನುಪಯೋಗಿಸಿ ಕೆಲಸ ಮಾಡಲು ತೊಲೆಯು ಮೇಲಕ್ಕೆದ್ದು ತಕ್ಕಸ್ಥಳಕ್ಕೆ ಕುಳಿತಿತು. ಆಗ ಬಂದ ಗೃಹಸ್ಥನು—ಕರ್ಪೋರಾಲ್‌ಸಾಹೇಬರೇ, ಇಂತಹ ಕಷ್ಟದ ಕೆಲಸವು ಒದಗಿದರೆ ನಿಮ್ಮ ಮುಖ್ಯ ಸೇನಾಪತಿಗೆ ಬರೆದುಕೊಳ್ಳಿರಿ. ಆತನು ಈಗಿನಂತೆ ಮತ್ತೆ ಬಂದು ನಿಮ್ಮ ಕೆಲಸವನ್ನು ಮಾಡಿಕೊಟ್ಟು ಹೋಗುವನು ಎಂದು ಹೇಳಿದನು.

ಕರ್ಪೋರಾಲನ ತಲೆಯ ಮೇಲೆ ಮುಗಿಲು ಕೆಡೆದಂತಾಯಿತು. ಬಂದ ಗೃಹಸ್ಥನು ತನ್ನ ಮುಖ್ಯಸೇನಾಪತಿಯಾದ ಮಹಾಮಾನ್ಯ ಜಾರ್ಜ್ ವಾಶಿಂಗ್ಟನನೆಂಬುದನ್ನರಿತು ಆ ಸೈನಿಕರು ಆತನ ಮಹಾನುಭಾವತೆಗೂ, ಸಹಾನುಭೂತಿಗೂ ಮೆಚ್ಚಿ ಆನಂದದಿಂದ ಜಯಜಯಕಾರ ಮಾಡಿದರು.

ಇಂತಹ ಮುಂದಾಳುಗಳೇ ಪರತಂತ್ರರಾದ ಜನರನ್ನು ಎಲ್ಲ ವಿಧಗಳಿಂದ ಹುರುಪುಗೊಳಿಸಿ ಅವರ ಶಕ್ತಿಯನ್ನು ಏಕಮುಖವಾಗಿ ಮಾಡಿ ಅಸಂಭವ ಕಾರ್ಯವನ್ನು ಕೂಡ ಸಂಭವನೀಯವಾಗೆ ಮಾಡಿ ತೋರಿಸಬಲ್ಲರು.

---

ಮಡದಿಯ ಪ್ರೇಮ.

## ೪೦ ಬವೇರಿಯದ ಹೆಂಗುಸುರು.

ಜರ್ಮನಿಯ ಸಮ್ರಾಜನಾಗಿದ್ದ ಕೆನರಾಡನು ಬವೇರಿಯದ ಅರಸನ ವಿನಿಬರ್ಗ್ ಕೋಟೆಗೆ ಹಲವುದಿವಸಗಳಿಂದ ಮುತ್ತಿಗೆಹಾಕಿ ಹಾನಿಹೊಂದಿದ್ದನು. ಆಗ ಜರ್ಮನಿಯಲ್ಲಿ ರೋಮನ್ ಕಥೊಲಿಕರಿಗೂ ಪ್ರಾಟೆಸ್ಟಂಟರಿಗೂ ೩೦ವರ್ಷಗಳ ಯುದ್ಧವು ನಡೆದಿತ್ತು. ಬಹು ದಿವಸಗಳಿಂದ ಯುದ್ಧವು ನಡೆದುದರಿಂದ ಅವರ ನಡುವೆ ವೈರವು ಅತಿಶಯವಾಗಿ ಬಳೆದಿತ್ತು. ಅದರಿಂದ ಸಮ್ರಾಜನ ಪಕ್ಷದವರು ಕೋಟೆಯನ್ನು ಜಯಸಿದ ಕೂಡಲೆ ಭಯಂಕರ ಕೊಲೆಯನ್ನು ಮಾಡಬೇಕೆಂದು ಹವಣಿಸಿದ್ದರು.

ಆಹಾರಸಾಮಗ್ರಿಯು ಇಲ್ಲದಂತಾಗಲು ಕೋಟೆಯನ್ನು ಕಾದುಕೊಳ್ಳುವುದು ಅಸಾಧ್ಯವಾಯಿತು. ಬವೇರಿಯದ ಅರಸನು ಕೋಟೆಯನ್ನು ಹಗೆಗಳಿಗೊಪ್ಪಿಸಿ ತಾನು ಹೊರಟು ಹೋಗುವ ಮಾತನ್ನೆತ್ತಿದನು. ಸಮ್ರಾಜನು ಕೋಟೆಯೊಳಗಿನ ಯಾವ ಸೈನಿಕನಿಗೂ ಪ್ರಾಣದಾನಕೊಡಲು ತಾನು ಬದ್ಧನಲ್ಲವೆಂದು ಮೊದಲೇ ತಿಳುಹಿದನು. ಆಗ ಬವೇರಿಯದ ಅರಸಿಯು ತನಗೆ ಕೋಟೆಯೊಳಗಿನ ಎಲ್ಲ ಹೆಂಗುಸರೊಡನೆ ಹೊರಗೆ ಹೋಗುವುದಕ್ಕೆ ಒಪ್ಪಿಗೆಯನ್ನೀಯಬೇಕೆಂದು ಕೇಳಿಕೊಂಡಳು. ಸಮ್ರಾಜನು ಸ್ತ್ರೀಯರನ್ನು ಗೌರವಿಸುತ್ತಿದ್ದನು. ಕೋಟೆಯನ್ನು ಆಕ್ರಮಿಸಿದ ಬಳಿಕ ತನ್ನ ಸೈನಿಕರು ಹೆಂಗುಸರನ್ನು ಬಲುಮೆಯಿಂದ ಅಪಮಾನಗೊಳಿಸಬಹುದೆಂದು ಅವನು ತರ್ಕಿಸಿದ್ದನು. ಅದುದರಿಂದ ಆತನು ಬವೇರಿಯದರಸಿಯ ಮಾತನ್ನು ಒಮ್ಮೆಲಿ ಒಪ್ಪಿದನು; ಮತ್ತು ಹೆಂಗುಸರೆಲ್ಲರು ತಾವು ಹೊರಬಹುದಾದಷ್ಟು ಬೇಕಾದ ಬೆಲೆಯುಳ್ಳ ಒಡವೆಗಳನ್ನು ಹೊತ್ತುಕೊಂಡು ಹೋಗಬಹುದೆಂದೂ ಅವರನ್ನು ಯಾರೂ ಪೀಡಿಸರೆಂದೂ ತಿಳುಹಿದನು.

ಕೆಲಹೊತ್ತಾದ ಬಳಿಕ ಕೋಟೆಯ ಬಾಗಿಲು ತೆರೆಯಿತು. ಅರಸಿಯೂ, ಕೋಟೆಯೊಳಗಿನ ಪ್ರತಿಒಬ್ಬ ಹೆಂಗುಸೂ ತಂತಮ್ಮ ಗಂಡಂದಿರನ್ನು ಹೆಗಲಮೇಲೆ ಹೊತ್ತುಕೊಂಡು ಬಹುಕಷ್ಟದಿಂದ ಆಗಸೆಯ ಬಾಗಿಲಿಂದ ಹೊರಹೊರಟಿದ್ದಾರೆ! ಸಮ್ರಾಜನು ಈ ದೃಶ್ಯವನ್ನು ನೋಡಿ ಬೆರಗಾದನು. ಇದೇನೆಂದು ಆತನು ಕೇಳಲು ಬವೇರಿಯದ ಅರಸಿಯು—ಹೆಂಗುಸುರು ತಮ್ಮ ಬೆಲೆಯುಳ್ಳ ಒಡವೆಯನ್ನು—ಸರ್ವಸ್ವವನ್ನು—ಹೊತ್ತುಕೊಂಡು ನಡೆದಿದ್ದಾರೆ; ಅದಕ್ಕೆ ತಮ್ಮ ಒಪ್ಪಿಗೆಯುಂಟು. ಎಂದು ಹೇಳಿದಳು. ಈ ಮಾತನ್ನು ಕೇಳಿದೊಡನೆ ಸಮ್ರಾಜನ ಹೃದಯವು ಉಕ್ಕಿ ಬಂದಂತಾಯಿತು; ಕಣ್ಣುಗಳಲ್ಲಿ ನೀರು ತುಂಬಿಕೊಂಡುವು. ಆಗ ಆತನು ಕೋಟೆಯೊಳಗಿದ್ದ ಗಂಡುಸರೆಲ್ಲರೂ ಹೆಂಡಂದಿರ ಹೆಗಲಮೇಲಿಂದ ಇಳಿದು ನಡೆಯುತ್ತ ಹೊರಗೆ ಹೋಗಬಹುದೆಂದು ಹೇಳಿದನು.

ಆದರ್ಶ ಭಾರತೀಯ ನ್ಯಾಯಾಧೀಶ.

## ೪೧ ಪ್ರಭುಣೆ ರಾಮಶಾಸ್ತ್ರಿ.

ಮರಾಠರ ಅಭ್ಯುದಯ ಕಾಲದಲ್ಲಿ ಪ್ರಸಿದ್ಧಿಯನ್ನೈದಿದ ಮಹಾತ್ಮರಲ್ಲಿ ಪ್ರಭುಣೆ ರಾಮಶಾಸ್ತ್ರಿಗಳು ಮೊದಲನೆಯ ತರಗತಿಯವರು. ಪೇಶವೆಯವರ ಸಾಮ್ರಾಜ್ಯದಲ್ಲಿ ತಾವು ವಹಿಸಿಕೊಂಡ ನ್ಯಾಯವಿಚಾರಣೆಯ ಅಧಿಕಾರದಲ್ಲಿ ತೋರಿಸಿದ ನಿಸ್ಪೃಹತೆ, ನಿರ್ಭಯತೆ, ನ್ಯಾಯನಿಷ್ಠೆ ಮೊದಲಾದ ಉಚ್ಚಗುಣ ಗಳಿಂದ ಇವರು ಅರ್ವಾಚೀನಕಾಲದಲ್ಲಿ ಭರತಖಂಡದ ಆದರ್ಶಪುರುಷರಲ್ಲೊಬ್ಬರಾಗಿ ಹೋದರು. ಭರತಖಂಡದ ಸಂಸ್ಕೃತಿ, ಆದರ್ಶ ಇವುಗಳ ಮೇಲೆ ನಮ್ಮ ದೇಶದ ತರುಣರ ಪ್ರೀತಿಯು ಹೆಚ್ಚುತ್ತಿರುವ ಈ ಕಾಲದಲ್ಲಿ ಇಂತಹ ಮಹನೀಯರ ಚರಿತ್ರವು ಅವರ ಚಾರಿತ್ರಘಟನೆಗೆ ಸಹಾಯಕವಾಗುವುದೆಂಬ ವಿಷಯದಲ್ಲಿ ಸಂಶಯವಿಲ್ಲ.

ಮಹಾರಾಷ್ಟ್ರದೇಶದ ಕಲ್ಯಾಣ ಜಿಲ್ಲೆಯೊಳಗಿನ ಮಾಹುಲಿ ಗ್ರಾಮದಲ್ಲಿ ರಾಮಶಾಸ್ತ್ರಿಗಳು ೧೮ನೆಯ ಶತಮಾನದಲ್ಲಿ ಜನ್ಮತಾಳಿದರು. ಬಾಲ್ಯದಲ್ಲಿ ತಾಯಿ ತಂದೆಗಳು ತೀರಿಕೊಂಡುದರಿಂದ ರಾಮನು ೧೩ ವರ್ಷದವನಾಗುವವರೆಗೆ ದೊಡ್ಡಪ್ಪನ ಪಾಲನೆಯಲ್ಲಿದ್ದನು. ಬಳಿಕ ಮನೆಯಬಿಟ್ಟು ಹೊರಟು ಸಾತಾರೆಯ ಒಬ್ಬ ಸಾವುಕಾರನ ಮನೆಯ ನೀರಿನವನ ಕೆಲಸಕ್ಕೆ ನಿಂತನು. ಬಾಲ್ಯದಲ್ಲಿ ಈಸುವದು, ವ್ಯಾಯಾಮ, ಆಟ ಇವುಗಳಲ್ಲಿಯೇ ವೇಳೆಯನ್ನು ಕಳೆದ ರಾಮನಿಗೆ ಓದುಬರಹಗಳ ಗಂಧವೂ ಕೂಡ ಇರಲಿಲ್ಲ. ಈತನು ತನ್ನ ಸರಳಸ್ವಭಾವ ದಿಂದಲೂ ನಂಬುಗೆಯಿಂದಲೂ ಸ್ವಲ್ಪ ದಿವಸಗಳಲ್ಲಿ ಒಡೆಯನ ಪ್ರೀತಿಗೆ ಪಾತ್ರ ವಾದನು. ಕೆಲವು ವರ್ಷಗಳ ತರುವಾಯ ಒಂದು ದಿವಸ ರಾಮನು ಅಡಿಗೆಗೆ ನೀರನ್ನು ತಂದು ಹಾಕುತ್ತಿರುವಾಗ ತನ್ನ ಒಡೆಯನು ಕೆಲವು ಮುತ್ತುಗಳ ಮಾರಾಟಕ್ಕಾಗಿ ಅವುಗಳ ಪರೀಕ್ಷೆ ಮಾಡುತ್ತ ಕುಳಿತಿದ್ದನು. ರಾಮನು ಅಡಿಗೆಯ ನೀರಿಗೆ ಅಸಡ್ಡೆ ತೋರಿಸಿ ಮುತ್ತಿನ ನೀರನ್ನು ನೋಡುತ್ತ ನಿಂತನು. ಆಗ ಸಾವು ಕಾರನು– ಎಲಾ, ಏನನ್ನು ನೋಡುತ್ತ ಹೀಗೆ ಕಲ್ಲಿನಂತೆ ನಿಂತಿರುವೆಯೋ ಎಂದು ಕೇಳಲು, ಆ ಸರಳಸ್ವಭಾವದ ಬಾಲಕನು—ಮುತ್ತುಗಳನ್ನಿಟ್ಟುಕೊಳ್ಳಬೇಕೆಂಬ ಆಸೆಯಿಂದ ನೋಡುತ್ತಿದ್ದೇನೆ ಎಂದು ಹೇಳಿದನು. ಸಾವುಕಾರನು ನಗುತ್ತ

ಅಯ್ಯಾ, ದೊಡ್ಡ ದೊಡ್ಡ ವಿದ್ವಾಂಸರೂ, ಅರಸರೂ, ಶ್ರೀಮಂತರೂ, ಸಾಮಂತ ರೂ, ವೀರಪುರುಷರೂ ಇಂತಹ ಮುತ್ತುಗಳನ್ನು ಧರಿಸಬಲ್ಲರಲ್ಲದೆ ಉಳಿದವರಿಗೆ ಹೇಗೆ ದೊರೆತಾವು ಎಂದು ಹೇಳಿದನು.

ಬ್ರಾಹ್ಮಣ ಪುತ್ರನು ಬಹಳ ನಾಚಿದನು. ಓದುಬರಹಗಳನ್ನು ಕಲಿತರೆ ತಾನೂ ಪಂಡಿತನಾಗಬಹುದೆಂದು ಬಗೆದನು. ತೆರೆದ ಹೃದಯದ ಆ ಹುಡುಗನು ಆಗಲೇ ತನ್ನ ಒಡೆಯನನ್ನು ಕುರಿತು–ನಾನು ಕಾಶಿಗೆ ಹೋಗಲಾಪೆನಾದರೆ ಅಲ್ಲಿ ವಿದ್ಯಾಭ್ಯಾಸಮಾಡಿ ಪಂಡಿತನಾಗಬಲ್ಲೆನು ಎಂದು ಹೇಳಿದನು.

ಸಾವುಕಾರನು ರಾಮುನ ಸರಳಸ್ವಭಾವಕ್ಕೆ ಮೆಚ್ಚಿದ್ದನು. ಹುಡುಗನು ವಿದ್ಯೆಯು ಕಲಿಯಲು ಹುರಿಯಾಗಿರುವುದನ್ನು ಕಂಡು ಆತನನ್ನು ಕಾಶಿಗೆ ಕಳು ಹಲೊಪ್ಪಿಕೊಂಡನು. ಆ ಕಾಲದಲ್ಲಿ ಕಾಶಿಗೆ ಹೋಗುವುದು ಸುಲಭವಾಗಿರ ಲಿಲ್ಲ. ಆದರೆ ಆ ಕಾಲದ ದೊಡ್ಡ ದೊಡ್ಡ ವ್ಯಾಪಾರಿಗಳು ಭರತಖಂಡದ ಹಲ ವೆಡೆಗಳಲ್ಲಿ ತಮ್ಮ ದಲಾಲಿಗಳನ್ನಿಟ್ಟು ಟಪಾಲಿನ ವ್ಯವಸ್ಥೆಯನ್ನು ಮಾಡಿಕೊಂಡಿ ದ್ದರು. ರಾಮುನು ತನ್ನ ಸಾವುಕಾರನ ಸಹಾಯದಿಂದ ಕಾಶಿಗೆ ಹೋದನು. ಆಗ ಕಾಶಿಯಲ್ಲಿ ಪಾರಾಗುಂಡೆ ವಲ್ಲಮಭಟ್ಟರು ಒಂದು ದೊಡ್ಡ ಪಾಠಶಾಲೆಯ ನ್ನಿಟ್ಟಿದ್ದರು. ಅಲ್ಲಿ ಸಾವಿರಾರುಜನ ವಿದ್ಯಾರ್ಥಿಗಳು ಅನ್ನವಸ್ತ್ರಗಳ ಸಹಾಯ ವನ್ನೂ ಸುಶಿಕ್ಷಣವನ್ನೂ ಪಡೆಯುತ್ತಿದ್ದರು. ಜಯಪುರದ ಸವಾಯಿಜಯ ಸಿಂಹ ಮಹಾರಾಜರು ಆ ಪಾಠಶಾಲೆಗೆ ವರ್ಷಕ್ಕೆ ೧ ಲಕ್ಷ ರೂಪಾಯಿಗಳನ್ನು ಕೊಡುತ್ತಿದ್ದರು. ಪುಣೆಯ ಪೇಶವೆಯವರೂ ಸಹಾಯಮಾಡುತ್ತಿದ್ದರು. ವಲ್ಲ ಮಭಟ್ಟರ ಬಳಿಗೆ ೧೯ ವರ್ಷದ ನಿರಕ್ಷರಕುಕ್ಷಿಯಾದ ರಾಮುನು ಬಂದು ಕಣ್ಣೀರ ಸುರಿಸುತ್ತ ನಿಂತುಕೊಂಡು ವಿದ್ಯಾಭಿಕ್ಷೆಯನ್ನು ಬೇಡಿಕೊಂಡನು. ವಲ್ಲಮಭಟ್ಟರು ಬಂದ ವಿದ್ಯಾರ್ಥಿಯ ಪ್ರಕೃತಿಯನ್ನೂ ಮುಖಮುದ್ರೆಯನ್ನೂ ದಿಟ್ಟಿಸಿನೋಡಿ ಸಂತುಷ್ಟರಾಗಿ— ಏನೇನ ಓದಿ ಬಂದಿರುವೆ ಎಂದು ಕೇಳಿದರು. ಸರಳಸ್ವಭಾವದ ರಾಮುನು—ನಾನು ಏನನ್ನೂ ಓದಿಲ್ಲ; ಬರವಣಿಗೆ ಕೂಡ ಬರು ವುದಿಲ್ಲ ಎಂದು ಹೇಳಲು ಅಲ್ಲಿ ಇದ್ದ ವಿದ್ಯಾರ್ಥಿಗಳೆಲ್ಲ ಖೊಳ್ಳನೆ ನಕ್ಕರು.

ವಲ್ಲಮಭಟ್ಟರ ಅಳಿಯನೊಬ್ಬನು ವಯಸ್ಸಾದ ಬಳಿಕ ವಿದ್ಯಾಭ್ಯಾಸವನ್ನಾ ರಂಭಿಸಿದ್ದನು. ಆತನೊಡನೆ ರಾಮುನ ವಿದ್ಯಾಭ್ಯಾಸವು ನಡೆಯಿತು. ವಲ್ಲಮ

ಭಟ್ಟರು ಇವರಿಬ್ಬರ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಚೆನ್ನಾಗಿ ಮಾಡಿದರು. ದೃಢಶರೀರನೂ, ಸದಾಚಾರಿಯೂ, ವಿದ್ಯಾರ್ಜನಾಗ್ರಹಿಯೂ ಆದ ರಾಮನು ತ್ವರೆಯಿಂದ ವಿದ್ಯೆಯಲ್ಲಿ ಮುಂದುವರಿದನು. ಆತನಲ್ಲಿ ಸನಾತನಧರ್ಮದ ಪವಿತ್ರತೆ, ನಿಸ್ಪೃಹತೆ, ಉದಾರತೆ ಮೊದಲಾದ ಗುಣಗಳು ನೆಲಸಿದವು. ಆತನು ನ್ಯಾಯ, ವ್ಯಾಕರಣ, ವೇದಾಂತ, ಧರ್ಮಶಾಸ್ತ್ರ ಮೊದಲಾದ ವಿದ್ಯೆಗಳಲ್ಲಿ ಪಾರಂಗತನಾದನು. ಶಾಸ್ತ್ರಾಭ್ಯಾಸದಿಂದ ಮನಃಸಂಸ್ಕಾರವಾಗಲು ಆತನಲ್ಲಿ ಐಹಿಕಭೋಗಾಸಕ್ತಿಯು ಅಳಿದುಹೋಯಿತು. ರಾಮಶಾಸ್ತ್ರಿಯು ಅಗಾಧವಾದ ಪಾಂಡಿತ್ಯ, ಅಸಾಮಾನ್ಯಕರ್ತವ್ಯನಿಷ್ಠೆಗಳೆಂಬ ಮುಕ್ತಾಫಲಗಳ ಅಲಂಕಾರ ದಿಂದ ಅತಿಶಯವಾಗಿ ಶೋಭಿಸತೊಡಗಿದನು. ನಿರಕ್ಷರನಾಗಿದ್ದ ರಾಮನು ತನ್ನ ವ್ಯವಸಾಯ ಬಲದಿಂದ ಕೆಲವು ವರ್ಷಗಳಲ್ಲಿ ಸರ್ವ ಶಾಸ್ತ್ರವಿಶಾರದನಾಗಿ ರಾಮಶಾಸ್ತ್ರಿ ಎಂಬ ಅಭಿಧಾನವನ್ನು ಹೊಂದಿ ಕಾಶಿಯಿಂದ ಮರಳಿ ಸ್ವಗ್ರಾಮಕ್ಕೆ ಬಂದನು.

ರಾಮಶಾಸ್ತ್ರಿಯ ವಿದ್ವತ್ತೆ, ಧರ್ಮಶೀಲತೆ, ತೇಜಸ್ವಿತೆ ಮೊದಲಾದ ಗುಣ ಗಳ ಹೊಗಳಿಕೆಯು ಬಹುಮುಖವಾಗಿ ಹೊರಟು ದೂರದಲ್ಲಿರುವ ಪುಣೆಯ ಪೇಶವೆಯವರ ಕಿವಿಯವರೆಗೂ ಮುಟ್ಟಿತು. ಬಾಳಾಜಿ ಬಾಜೀರಾವ ಪೇಶ ವೆಯು ರಾಮಶಾಸ್ತ್ರಿಯನ್ನು ಸಂಮಾನದಿಂದ ಕರೆಕಳುಹಿ ತಮ್ಮ ಸಭಾಪಂಡಿತನ ನ್ನಾಗಿಯೂ ಧರ್ಮಾಧಿಕಾರಿಯನ್ನಾಗಿಯೂ ಮಾಡಿಕೊಂಡನು. ಭರತಖಂಡದ ಅರ್ಧಭಾಗವನ್ನಾಳುತ್ತಿದ್ದ ಪುಣೆಯ ಪೇಶವೆಯವರ ಉಚ್ಚನ್ಯಾಯಸಭೆಯಲ್ಲಿ (ಹಾಯ್‌ಕೋರ್ಟಿನಲ್ಲಿ) ರಾಮಶಾಸ್ತ್ರಿಯು ಮುಖ್ಯನ್ಯಾಯಾಧೀಶನಾದನು. ನಿರ್ಭಯತೆ, ಸರಳತೆ, ನ್ಯಾಯನಿಷ್ಠೆ ಮೊದಲಾದ ಗುಣಗಳಿಂದ ಪೇಶವೆಯ ವರೆಗೆ ಎಲ್ಲರೂ ರಾಮಶಾಸ್ತ್ರಿಗೆ ಅಂಜಿ ನಡೆಯುವರು. ಪಾಪಭೀರುಗಳಾದ ಹಲವು ಜನ ವಿದ್ವಾಂಸರನ್ನು ರಾಮಶಾಸ್ತ್ರಿಗಳು ತಮ್ಮ ಕೆಲಸಕ್ಕೆ ಸಹಾಯಕರ ನ್ನಾಗಿ ಮಾಡಿಕೊಂಡರು. ಮಾಧವರಾಯನು ಪೇಶವೆಯಾದಬಳಿಕ (ಕ್ರಿ. ೧೭೧೬) ಇವರ ಸಹಾಯದಿಂದ ರಾಜ್ಯದಲ್ಲೆಲ್ಲ ನ್ಯಾಯವಿಚಾರಣೆಯ ಸುವ್ಯವಸ್ಥೆಯನ್ನು ನೆಲೆಗೊಳಿಸಿದನು.

ಠ ಠ ಠ ಠ

ಪೇಶವೆ ಮಾಧವರಾಯನು ಒಂದು ವಿಷಯದಲ್ಲಿ ಮನವಿರಿಸಿದರೆ ಅದನ್ನೇ ಹಿಡಿದುಬಿಡುವನು. ಒಮ್ಮೆ ಆತನು ಯೋಗಸಾಧನದಲ್ಲಿ ಮನವಿಟ್ಟನು. ಕೆಲಜನ ಯೋಗಿಗಳನ್ನು ಕರೆಯಿಸಿಕೊಂಡು ಯೋಗಸಾಧನದಲ್ಲಿ ತೊಡಗಿದನು. ಒಂದು ದಿವಸ ರಾಮಶಾಸ್ತ್ರಿಯು ರಾಜಕೀಯ ಕಾರ್ಯಕ್ಕಾಗಿ ಪೇಶವೆಯ ಬಳಿಗೆ ಗೊತ್ತುಮಾಡಿದ ವೇಳೆಗೆ ಬಂದು ನೋಡುತ್ತಾನೆ—ಪೇಶವೆಯು ಯೋಗಾರೂಢನಾಗಿದ್ದಾನೆ. ರಾಮಶಾಸ್ತ್ರಿಯು ತಾನು ಬಂದುಹೋದ ಸುದ್ದಿಯನ್ನು ಪೇಶವೆಗೆ ತಿಳುಹಬೇಕೆಂದು ಆಳುಗಳನ್ನಾಜ್ಞಾಪಿಸಿ ಹೊರಟುಹೋದನು. ಪೇಶವೆಯು ಯೋಗವಿಳಿಸಿದ ಬಳಿಕ ಆಳುಗಳು ಆ ಮಾತನ್ನು ಹೇಳಿದರು. ಕೆಲವು ಹೊತ್ತಾದ ಬಳಿಕ ರಾಮಶಾಸ್ತ್ರಿಯು ಮತ್ತೆ ಬಂದು-ನಾನು ಕಾಶಿಗೆ ಹೋಗುವೆನೆಂದು ಪೇಶವೆಯ ಬಳಿಯಲ್ಲಿ ಹೇಳಿದನು. ಹಿಂದಿನ ಕಾಲದಲ್ಲಿ ಹಿಂದುರಾಜ್ಯಗಳಲ್ಲಿ ನೌಕರಿಯನ್ನು ಬಿಡುವೆನು, ಇನ್ನು ನಾನು ಕೆಲಸವನ್ನು ಮಾಡಲಾರೆನು, ನನ್ನ ರಾಜಿನಾಮೆಯನ್ನು ಸ್ವೀಕರಿಸಿರಿ ಎಂದು ಹೇಳುವುದನ್ನೇ ಪರ್ಯಾಯದಿಂದ ತೀರ್ಥಯಾತ್ರೆಗೆ ಹೊರಡುವೆನೆಂದು ಹೇಳುವ ವಾಡಿಕೆಯಿತ್ತು. ಈ ಮೊದಲು ಶಾಸ್ತ್ರಿಯು ತನ್ನ ಮನೆಯುವರೆಗೆ ಬಂದು ಮರಳಿ ಹೋಗಬೇಕಾಯಿತೆಂದು ಪೇಶವೆಯು ಅಸಮಾಧಾನವನ್ನು ತೋರ್ಪಡಿಸಿದನು. ಆಗ ತಾನು ಬ್ರಾಹ್ಮಣಿಕೆಯ ಕರ್ಮವನ್ನೇ ಆಚರಿಸುತ್ತಿದ್ದುದರಿಂದ ಶಾಸ್ತ್ರಿಯು ತನ್ನನ್ನು ಹೊಗಳಬೇಕಲ್ಲದೆ ನೌಕರಿಯನ್ನು ಬಿಟ್ಟುಹೋಗುವಷ್ಟುಮಟ್ಟಿಗೆ ಅಸಮಾಧಾನಬಡುವ ಕಾರಣವಿಲ್ಲೆಂದು ಭಾವಿಸಿ ಪೇಶವೆಯು ಶಾಸ್ತ್ರಿಯ ಮಾತನ್ನು ಆಕ್ಷೇಪಿಸಿದನು. ಆಗ ರಾಮಶಾಸ್ತ್ರಿಯು–'ಬ್ರಾಹ್ಮಣರು ಯೋಗಾಭ್ಯಾಸ ಮಾಡಬೇಕೆಂಬುದನ್ನು ನಾನು ಒಪ್ಪುವೆನು; ಆದರೆ ಯಾವಾಗಲೂ ಅದರಲ್ಲಿಯೇ ತೊಡಗಿರುವುದಾದರೆ ನನ್ನೊಡನೆ ತಾವೂ ನಡೆಯಿರಿ; ನಾವಿಬ್ಬರೂ ರಾಜಕಾರ್ಯವನ್ನು ತೊರೆದು ಯೋಗದಲ್ಲಿಯೇ ತೊಡಗುವ; ಆದರೆ ಬ್ರಾಹ್ಮಣನು ಸ್ವಧರ್ಮವನ್ನು ಬಿಟ್ಟು ಕ್ಷತ್ರಿಯಧರ್ಮವನ್ನು— ರಾಜ್ಯಪರಿಪಾಲನೆಯನ್ನು— ಕೈಕೊಂಡಬಳಿಕ ಆ ಕಾರ್ಯವನ್ನು ಅತ್ಯುತ್ತಮವಾಗೆ, ಕ್ಷತ್ರಿಯರೆಲ್ಲರಿಗಿಂತ ಮಿಗಿಲಾಗೆ ಮಾಡಿದ ಹೊರತು ಆ ದೋಷಕ್ಕೆ ಪ್ರತೀಕಾರವಿಲ್ಲ. ಕೈಕೊಂಡ ರಾಜ್ಯಪರಿಪಾಲನೆಯನ್ನು ಬಿಡದಿರುವವನಿಗೆ ತನ್ನ ಪ್ರಜೆಗಳು ಸುಖಶಾಂತಿಗಳಿಂದ ನಲಿದಾಡುವಂತೆ ಮಾಡ್ಯ

ವುದನ್ನುಳಿದು ಬೇರೆ ಕರ್ತವ್ಯವು ಇನ್ನಾವುದೂ ಇಲ್ಲ. ಕರ್ತವ್ಯಪಾಲನವೇ ಧರ್ಮವು ' ಎಂದು ಹೇಳಿದನು.

ಮಾಧವರಾಯನು ಶಾಸ್ತ್ರಿಯ ಉಪದೇಶವನ್ನು ತಲೆಯಲ್ಲಾಂತು ಅಂದಿನಿಂದ ಯೋಗಾಭ್ಯಾಸವನ್ನು ಬಿಟ್ಟನು. ನಾವು ನಮ್ಮ ಕರ್ತವ್ಯವನ್ನು ಸರಿಯಾಗಿ ಪಾಲಿಸಿದರೆ ದೇಶವು ಈಗಲೂ ಪೂರ್ವದ ವೈಭವವನ್ನು ಪಡೆಯಬಹುದು.

❦ ❦ ❦ ❦

ಪುಣೆಯಲ್ಲಿ ಪೇಶವೆಯವರ ಹಿಂದು ಸಾಮ್ರಾಜ್ಯದ ಕಾಲದಲ್ಲಿ ಪ್ರತಿವರ್ಷ ಶ್ರಾವಣಮಾಸದಲ್ಲಿ ಸಮಗ್ರ ಭರತಖಂಡದ ದೊಡ್ಡ ದೊಡ್ಡ ವಿದ್ವಾಂಸರ ಮಹಾ ಸಭೆಯು ( ಕಾಂಗ್ರೆಸು ) ನೆರೆಯುತ್ತಿತ್ತು. ಅದಕ್ಕೆ ಪ್ರತಿನಿಧಿಗಳು ಚಂದಾಹಣವನ್ನೂ ಊಟದ ವೆಚ್ಚವನ್ನೂ ಕೊಡಬೇಕಾಗುತ್ತಿರಲಿಲ್ಲ. ಪೇಶವೆಯು ಈ ಸಭೆಯ ವಿದ್ವಾಂಸರಿಗೆ ಸುಮಾರು ೫ ಲಕ್ಷ ರೂಪಾಯಿಗಳನ್ನು ದಕ್ಷಿಣೆಯಾಗಿ ಕೊಡುತ್ತಿದ್ದನು. ಒಂದು ವರ್ಷ ೧೯ ಲಕ್ಷ ರೂಪಾಯಿಗಳು ಕೊಡಲ್ಪಟ್ಟಿದ್ದುವು. ಕಾಶಿ, ಮಿಥಿಲೆ, ಕಾಶ್ಮೀರ, ತಂಜಾವರ ಮೊದಲಾದ ಸ್ಥಾನಗಳಿಂದ ಪಂಡಿತರು ಬರುತ್ತಿದ್ದರು. ಪಂಡಿತರಿಗೆ ಇಪ್ಪತ್ತು ರೂಪಾಯಿಗಳಿಂದ ನೂರು ರೂಪಾಯಿಗಳ ವರೆಗೆ ದಕ್ಷಿಣೆಯೂ, ಸಾಧಾರಣ ಬ್ರಾಹ್ಮಣರಿಗೆ ೨ ರೂಪಾಯಿ ದಕ್ಷಿಣೆಯೂ ಸಲ್ಲುತ್ತಿತ್ತು. ಪಂಡಿತರ ಯೋಗ್ಯತೆಯನ್ನು ನಿರ್ಣಯಿಸುವ ಕೆಲಸವನ್ನು ರಾಮಶಾಸ್ತ್ರಿಯು ತಾನೇ ಮಾಡುವನು. ಒಮ್ಮೆ ನಾನಾಫಡಣವಿಸನು ದಕ್ಷಿಣೆಯ ರೂಪಾಯಿಗಳ ತಟ್ಟೆಯನ್ನು ಮುಂದಿಟ್ಟುಕೊಂಡು ಕುಳಿತಿದ್ದನು. ಪಕ್ಕದಲ್ಲಿ ರಾಮಶಾಸ್ತ್ರಿಯು ಕುಳಿತಿದ್ದನು. ದಕ್ಷಿಣೆ ಕೊಡುವ ಕೆಲಸವು ನಡೆದಿದೆ. ಆ ಸಮಯದಲ್ಲಿ ರಾಮಶಾಸ್ತ್ರಿಯ ಅಣ್ಣನು ಬಂದನು. ಆತನನ್ನು ನೋಡಿ ನಾನಾ ಫಡಣವಿಸನು ೨೦ ರೂಪಾಯಿಗಳನ್ನೆಣಿಸಿ ರಾಮಶಾಸ್ತ್ರಿಯ ಕೈಯಲ್ಲಿ ಕೊಟ್ಟನು. ಆದರೆ ರಾಮಶಾಸ್ತ್ರಿಯ ಅಣ್ಣನು ಅಕ್ಷರಶೂನ್ಯನು. ರಾಮಶಾಸ್ತ್ರಿಯು ಎರಡು ರೂಪಾಯಿಗಳನ್ನು ಮಾತ್ರ ತನ್ನ ಅಣ್ಣನ ಕೈಯಲ್ಲಿಟ್ಟು ಉಳಿದ ರೂಪಾಯಿಗಳನ್ನು ಫಡಣವಿಸನ ಕೈಯಲ್ಲಿ ಮರಳಿ ಕೊಟ್ಟನು. ಮತ್ತು ಫಡಣವಿಸನನ್ನು ಕುರಿತು ಮೆಲ್ಲನೆ— ಈತನು ನನ್ನ ಅಣ್ಣನು ನಿಜ; ಮನೆಯಲ್ಲಿ ನಾನು ಈತನ ಕಾಲಿಗೆರಗುವೆನು; ಆದರೆ ಇಲ್ಲಿ ಪಂಡಿತರ ಪಾಂಡಿತ್ಯದ ವಿಚಾರಣೆಗಾಗಿ ಕುಳಿತಿರುವೆನು;

ನನ್ನ ಅಣ್ಣನೆಂದು ಆತನಿಗೆ ಸಲ್ಲಬೇಕಾದುದಕ್ಕಿಂತ ಹೆಚ್ಚಿಗೆ ದಕ್ಷಿಣೆಯನ್ನು ಕೊಡ ಲಾರೆನು ಎಂದು ಹೇಳಿದನು.

ಅ ಅ ಅ ಅ

ರಾಮಶಾಸ್ತ್ರಿಯ ಮನೆಯಲ್ಲಿ ಯಾವಾಗಲೂ ಒಂದುದಿನದ ಆಹಾರಸಾಮ ಗ್ರಿಯ ಸಂಗ್ರಹವು ಮಾತ್ರ ಇರುವದು. ಸರಕಾರದ ಉಗ್ರಾಣದಿಂದ ಉಲು ಪೆಯು ಹೆಚ್ಚಿಗೆ ಬಂದ ದಿವಸ ಮಿಕ್ಕಿದನ್ನು ದಾನಮಾಡಿ ಬಿಡುವನು. ರಾಮ ಶಾಸ್ತ್ರಿಗೆ ಉಂಬಳಿಯನ್ನು ಹಾಕಿ ಕೊಡಬೇಕೆಂದು ಪ್ರಯತ್ನಬಟ್ಟರೂ ಆತನು ಅದನ್ನು ನಿಷೇಧಿಸಲು ಪೇಶವೆಯು ಆತನ ಮಗನಾದ ಗೋಪಾಲನಿಗೆ ೩೨೦೦ ರೂ. ಹುಟ್ಟುವಳಿಯಾಗುವ ಉಂಬಳಿಯನ್ನು ಕೊಡಬೇಕೆಂದು ಬಯ ಸಿದನು. ಗೋಪಾಲನು ಓದುಬರಹಗಳನ್ನರಿಯನು. ರಾಮಶಾಸ್ತ್ರಿಯು ಪೇಶವೆ ಯನ್ನು ಕುರಿತು-ಆತನಿಗೆ ಉಂಬಳಿಯನ್ನು ಕೊಡಬಾರದು; ಕೂಲಿಯಮಾಡಿ ಹೊಟ್ಟೆಯ ಸಾಗಿಸುವುದಕ್ಕೇ ಆತನು ತಕ್ಕವನು. ನನ್ನ ಮಗನೆಂದು ರಾಜ್ಯದ ಹಣದ ದುರುಪಯೋಗ ಮಾಡಿದರೆ ಆ ದೋಷವು ನನಗೂ ತಟ್ಟುವುದು. ಎಂದು ಹೇಳಿದನು. ರಾಮಶಾಸ್ತ್ರಿಯು ಮಡಿದ ಬಳಿಕ ಗೋಪಾಲನಿಗೆ ಶಾಸ್ತ್ರಿ (?) ಎಂಬ ಉಪಾಧಿಯೂ ಆ ೩೨೦೦ ರೂ. ಗಳ ಉಂಬಳಿಯೂ ಕೊಡಲ್ಪಟ್ಟವು.

ಈ ಈ ಈ ಈ

ಪೇಶವೆ ಬಾಳಾಜಿಬಾಜಿರಾಯನನ್ನು ನಾನಾಸಾಹೇಬನೆಂದು ಕರೆಯುತ್ತಿ ದ್ದರು. ನಮ್ಮ ದೇಶದಲ್ಲಿ ಈಗ ರಾವ್‌ಸಾಹೇಬ್, ರಾವ್‌ಬಹದೂರ್, ಮೊದ ಲಾದ ಉಪಾಧಿಗಳು ಅಗ್ಗವಾಗಿರುವುದರಿಂದ ಕಂಡವರು ಸಾಹೇಬರೆಂದೆನಿಸಿ ಕೊಳ್ಳುವಂತೆ ಆ ಕಾಲದಲ್ಲಿರಲಿಲ್ಲ. ಆಗ ಪೇಶವೆಯ ಸರಿಕರನ್ನು ಮಾತ್ರ ರಾವ್‌ಸಾಹೇಬ ಎಂದು ಹೇಳುವ ವಾಡಿಕೆಯಿತ್ತು. ಬರಬರುತ್ತ ದುಡ್ಡುಳ್ಳವ ರೆಲ್ಲರು ರಾವ್‌ಸಾಹೇಬ ಎಂದೆನಿಸಿಕೊಳ್ಳತೊಡಗಿದರು. ಆದರೆ ರಾಮಶಾಸ್ತ್ರಿಯು ಪೇಶವೆಯ ಮನೆತನದವರನ್ನುಳಿದು ಬೇರೆ ಜನರ ಹೆಸರಿನ ಮುಂದೆ ಸಾಹೇಬ ಎಂಬ ಉಪಾಧಿಯನ್ನು ಸಹಿಸಿಕೊಳ್ಳುತ್ತಿರಲಿಲ್ಲ. ನಾನಾಫಡಣವಿಸನು, ಮಂತ್ರಿ ಪದವನ್ನು ವಹಿಸಿ ರಾಜಸಭೆಯಲ್ಲಿ ವಿಶೇಷವಾದ ಗೌರವವನ್ನು ಹೊಂದಿರುವಾಗ ಒಂದು ದಿವಸ ರಾಮಶಾಸ್ತ್ರಿಯನ್ನು ಕರೆಯಲು ಪಲ್ಲಕ್ಕಿಯನ್ನು ಕಳುಹಿದನು. ಆಳುಗಳು ನಾನಾಸಾಹೇಬರು ತಮ್ಮಸಲುವಾಗಿ ಪಲ್ಲಕ್ಕಿಯನ್ನು ಕಳುಹಿರುವ

ರೆಂದು ಹೇಳಿದರು. ಶಾಸ್ತ್ರಿಯು ಪಲ್ಲಕ್ಕಿಯವರನ್ನು ಮರಳಿ ಹೋಗಹೇಳಿ—ನಾನಾಸಾಹೇಬರು ( ಬಾಳಾಜಿಬಾಜಿರಾವ್ ) ದೇಹವಿಟ್ಟು ಬಹಳ ವರ್ಷಗಳಾದುವು; ಇನ್ನಾವ ನಾನಾಸಾಹೇಬನನ್ನೂ ನಾನರಿಯೆನೆಂದು ನುಡಿದನು.

ಒಂದಾನೊಂದು ದಿವಸ ಒಬ್ಬ ವೈಷ್ಣವಸ್ತ್ರೀಯು ರಾಮಶಾಸ್ತ್ರಿಯನ್ನು ಕುರಿತು—ನಮ್ಮ ಶಾಸ್ತ್ರದಲ್ಲಿ ಸ್ತ್ರೀಯರನ್ನು ಕುರಿತು—ಕಲಿಯುಗದಲ್ಲಿ ಅವರು ಮನವಾರೆ ತಿನ್ನುವರೆಂದೂ, ಆದರಿಂದ ಅವರು ದಾರಿಯ ಬಿಡುವರೆಂದೂ ಹೇಳಿದೆ. ಇನ್ನು ವಿಧವಾವಿವಾಹವನ್ನು ಶಾಸ್ತ್ರಕಾರರು ನಿಷೇಧಿಸಿದ್ದಾರೆ. ಇದು ಹೇಗೆ ಎಂದು ಕೇಳಿದಳು. ಸ್ತ್ರೀನಿಂದೆಯನ್ನು ಕೇಳಿ ಕಳವಳಗೊಂಡು ಸರಳಮನಸ್ಸಿನ ಶಾಸ್ತ್ರಿಯು—ಅಮ್ಮಾ, ನೀವು ಹೇಳುವುದು ನಿಜ; ಶಾಸ್ತ್ರಕಾರರೆಲ್ಲ ಗಂಡುಸರು; ಹೆಂಗುಸರೂ ಶಾಸ್ತ್ರಕಾರರಾಗಿದ್ದರೆ ಸ್ತ್ರೀಯರಿಗೆ ಇಷ್ಟೊಂದು ಅನನುಕೂಲತೆಯಾಗುತ್ತಿರಲಿಲ್ಲ ಎಂದು ಹೇಳಿದನು. ಈ ಸಂದರ್ಭದಲ್ಲಿ ಶಾಸ್ತ್ರಿಯು—ಪರಸ್ತ್ರೀಯರನ್ನೆಲ್ಲ ತಾಯಿಯಂತೆ ಸಂಬೋಧಿಸುತ್ತಿದ್ದನೆಂಬುದೂ, ಸ್ತ್ರೀನಿಂದೆಯನ್ನು ಸೇರುತ್ತಿರಲಿಲ್ಲವೆಂಬುದೂ ಕಂಡುಬರುವುದು. ಇದಲ್ಲದೆ ಸಾಮಾನ್ಯವಾಗಿ ಎಲ್ಲ ತರಗತಿಯ ವಿಧವೆಯರೂ ವಿವಾಹ ಮಾಡಿಕೊಳ್ಳಬೇಕೆಂಬ ಭಾವವನ್ನು ಆತನು ಈ ಮಾತಿನಲ್ಲಿ ತೋರ್ಪಡಿಸಿಲ್ಲ.

ಸರದಾರ ಪರಶುರಾಮ ಭಾವು ಪಟವರ್ಧನ ಎಂಬವನು ಪೇಶವೆ ಮಾಧವರಾಯನ ಮುಖ್ಯ ಸೇನಾಪತಿಯು. ಆತನ ಎಂಟುವರ್ಷದ ಮಗಳು ಮದುವೆಯಾದ ನಾಲ್ಕು ದಿವಸಗಳಲ್ಲಿಯೇ ವಿಧವೆಯಾದಳು. ಶೋಕಾಕುಲನಾದ ಬ್ರಾಹ್ಮಣ ಸೇನಾಪತಿಯು ರಾಮಶಾಸ್ತ್ರಿಯನ್ನು ಕುರಿತು—ಬಾಲಿಕೆಯು ಪತಿಯ ದೇಹದೊಡನೆ ಸುಟ್ಟುಕೊಂಡು ಸಾಯಬೇಕೋ ಇಲ್ಲವೆ ಮತ್ತೆ ಮದುವೆಯಾಗಬೇಕೋ ಎಂಬೀವಿಷಯದಲ್ಲಿ ಶಾಸ್ತ್ರವು ಏನ ಹೇಳುತ್ತಿದೆ? ಎಂದು ಕೇಳಿದನು. ಶಾಸ್ತ್ರಿಯು-ಈ ವಿಷಯದಲ್ಲಿ ಶಾಸ್ತ್ರವು ಪುನರ್ವಿವಾಹವನ್ನೇ ಹೇಳುತ್ತಿದೆ ಎಂದು ಹೇಳಿದನು. ಆಗ ಪೇಶವೆಯ ಅರಮನೆಯಲ್ಲಿ ಪಂಡಿತರ ಮಹಾಸಭೆಯು ಕರೆಯಲ್ಪಟ್ಟಿತು. ನಾನಾಫಡಣವಿಸನು ದೇಶಸ್ಥ-ಕೊಂಕಣಸ್ಥ ಪಂಡಿತರ, ಮತ್ತು ಕಾಶಿಯ ವಿದ್ವಾಂಸರ ಅಭಿಪ್ರಾಯಗಳನ್ನೆಲ್ಲ ಒಟ್ಟುಗೂಡಿಸಿದನು. ಪುಣೆ

ಯಲ್ಲಿ ನೆರೆದ ಆ ಮಹಾಸಭೆಯಲ್ಲಿ ರಾಮಶಾಸ್ತ್ರಿಯ ಮತವೇ ಶಾಸ್ತ್ರಸಂಮತವೆಂದು ಸಿದ್ಧವಾಯಿತು. ಆದರೆ ಪರಶುರಾಮಭಾವು ಪಟವರ್ಧನನು ತನ್ನ ಮತ್ತು ಮಗಳ ಸಲುವಾಗಿ ಕುಲಾಚಾರವನ್ನು ಮೀರಿ ಸಮಾಜದಲ್ಲಿ ಅಗೌರವವನ್ನು ಪಡೆಯಲೊಪ್ಪದೆ, ಮಗಳ ಪುನರ್ವಿವಾಹವನ್ನು ಮಾಡಲಿಲ್ಲ.

ವಿಧವೆಯರು ಬ್ರಹ್ಮಚರ್ಯವನ್ನು ಪಾಲಿಸುವುದೇ ಶ್ರೇಯಸ್ಕರವೆಂಬ ವಿಷಯದಲ್ಲಿ ಸಂಶಯವಿಲ್ಲ. ಸತ್ವಶಾಲಿನಿಯರಾದ ಬ್ರಾಹ್ಮಣಕನ್ಯೆಯರೂ, ಉಚ್ಚ ಜಾತಿಯ ಬ್ರಾಹ್ಮಣೇತರ-ಹಿಂದುಕನ್ಯೆಯರೂ ಬ್ರಹ್ಮಚರ್ಯದ ಈ ಶ್ರೇಷ್ಠ ಆದರ್ಶಕ್ಕೆ ಪರಾಙ್ಮುಖರಾಗಿ ಕೆಳಗಿಳಿಯುವುದಕ್ಕೆ ಅವರೇ ಒಪ್ಪುವುದಿಲ್ಲ. ಆದರೆ ಈ ತರದ ಸತ್ವವಿಲ್ಲದವರೂ, ಪಾವಿತ್ರ್ಯವನ್ನು ಕಾದುಕೊಳ್ಳುವ ದಾರ್ಢ್ಯವಿಲ್ಲದವರೂ ಆದ ವಿಧವೆಯರು ಶಾಸ್ತ್ರಸಂಮತವೆಂದಾಗಲಿ, ನೀತಿಮಾರ್ಗದಿಂದ ಚ್ಯುತಿಯಾಗುವ ಸಂಭವವುಂಟೆಂಬ ಭಯದಿಂದ ಅಪರಿಹಾರ್ಯವೆಂದಾಗಲಿ ಪುನರ್ವಿವಾಹವನ್ನು ಮಾಡಿಕೊಳ್ಳುವುದು ಒಂದು ದೃಷ್ಟಿಯಿಂದ ಯೋಗ್ಯವೆಂದು ತೋರಿದರೂ ಇನ್ನೊಂದು ದೃಷ್ಟಿಯಿಂದ ಸಂಭಾವಿತರ ಮನೆಯಲ್ಲಿ ವಿಧವೆಯರು ಮದುವೆಯಾಗಿ ಮಕ್ಕಳನ್ನು ಹೆರುವುದಕ್ಕೆ ಅಯೋಗ್ಯರೆಂಬ ದೃಢ ಭಾವನೆಯು ಭರತಖಂಡದಲ್ಲಿ ರೂಢ ಮೂಲವಾಗಿದೆ.

   

ಐದನೆಯ ಪೇಶವೆಯಾದ ನಾರಾಯಣರಾಯನ ಕೊಲೆಯು ಪೇಶವೆಯ ಮನೆಯೊಳಗಿನ ಒಳಸಂಚಿನಿಂದ ಆಯಿತು. ರಘುನಾಥರಾಯನೂ, ಆತನ ಹೆಂಡತಿ ಆನಂದಿಬಾಯಿಯೂ ಈ ಒಳಸಂಚಿನಲ್ಲಿ ಸೇರಿರುವರೆಂಬ ಸಂಶಯವು ಹುಟ್ಟಿದ ಕೂಡಲೆ ರಘುನಾಥರಾಯನು ಪೇಶವೆಪದವನ್ನಾಕ್ರಮಿಸಿದ್ದರೂ ಮೊದಲಿಗೆ ರಾಮಶಾಸ್ತ್ರಿಯು ಆತನ ದರಬಾರಕ್ಕೆ ಹೋಗಲಿಲ್ಲ. ಮುಂದೆ ವಿಶೇಷ ಪ್ರಯತ್ನಮಾಡಿ ರಘುನಾಥರಾಯನೇ ಈ ಒಳಸಂಚಿನಲ್ಲಿ ಮುಖ್ಯನಾಗಿರುವನೆಂಬುದರ ನಿರ್ಣಯವಾದಬಳಿಕ ರಾಮಶಾಸ್ತ್ರಿಯು ರಾಜಸಭೆಗೆ ಹೋಗಿ ರಘುನಾಥರಾಯನನ್ನು ಕುರಿತು-ನೀನು ನಿನ್ನ ಸೋದರನ ಮಗನೂ, ರಾಜನೂ, ಆದ ನಾರಾಯಣರಾಯನ ಕೊಲೆಯ ತಂತ್ರದಲ್ಲಿ ಸೇರಿದುದರಿಂದ ರಾಜಹತ್ಯೆ, ಬ್ರಹ್ಮಹತ್ಯೆ ಈ ಪಾತಕಗಳಿಗೆ ಗುರಿಯಾಗಿರುವೆ. ಎಂದು ಸ್ಪಷ್ಟವಾಗಿ ಹೇಳಿದನು.

ಪೇಶವೆ ನಾರಾಯಣರಾಯನು, ತನ್ನ ಚಿಕ್ಕಪ್ಪನಾದ ರಘುನಾಥರಾಯನು ದ್ರೋಹಮಾಡುವನೆಂಬ ಸಂಶಯದಿಂದ ಅರಮನೆಯಲ್ಲಿಯೇ ಕಾವಲುಗಾರರ ನ್ನಿರಿಸಿ ಆತನನ್ನು ಕಣ್ಸೆರೆಯಲ್ಲಿಡಲು ಆತನು ಸಿಟ್ಟಾಗಿ ಪೇಶವೆಯನ್ನು ಹಿಡಿಯ ಬೇಕೆಂದು ತನ್ನವರಾದ ಸುಮೇರಸಿಂಗ್ ಮತ್ತು ಯುಸುಫಖಾ ಎಂಬವರಿಗೆ ಕಾಗದ ಬರೆದಿದ್ದನು. ಪೇಶವೆಯ ' ಗಾದಿ 'ಯ ಮೇಲೆ ಕುಳಿತವನೂ, ಪೇಶವೆಯ ಕೊಲೆಯ ಮಾಡಿದವನೂ ಆದ ರಘುನಾಥರಾಯನ ರಾಜಸಭೆಗೆ ಹೋಗಿ, ಆತನಲ್ಲಿ ಅಭಿಮಾನವುಳ್ಳ ಸೈನಿಕರು ಶಸ್ತ್ರಗಳನ್ನು ಹಿಡಿದುಕೊಂಡು ಆವೇಶ ದಿಂದ ನಿಂತಿರಲು, ಶಾಸ್ತ್ರಿಯು ಬ್ರಹ್ಮಹತ್ಯೆ ಮತ್ತು ಪುತ್ರಹತ್ಯೆ ಎಂಬೀ ಮಹಾ ಪಾತಕಗಳನ್ನು ನಿರ್ಭಯವಾಗಿ ಆತನ ಮೇಲೆ ಆರೋಪಿಸಿದನು. ಆಗ ರಘುನಾಥ ರಾಯನು ಮುಂದುಗಾಣದೆ ಆ ಕಾಗದದ ಮೇಲೆ ತನ್ನ ಸ್ವಾಕ್ಷರ ( ಸಹಿ ) ವನ್ನು ಮಾಡಿದುದನ್ನು ಒಪ್ಪಿಕೊಂಡು, ಈ ಪಾಪಕ್ಕೆ ತಾನು ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದು ಕೇಳಿದನು. ಆಗ ರಾಮಶಾಸ್ತ್ರಿಯ ಕೈಯಲ್ಲಿ ರಘುನಾಥ ರಾಯನ ಆ ಮೂಲ ಕಾಗದವೇ ಇದ್ದುದರಿಂದ ಒಪ್ಪಿಕೊಳ್ಳದಿರುವುದು ಅಶಕ್ಯ ವಾಯಿತು. ರಘುನಾಥರಾಯನ ಹೆಂಡತಿಯಾದ ಆನಂದಿಬಾಯಿಯು ಈ ಕಾಗದ ದಲ್ಲಿದ್ದ 'ಧರಾವೆ' [ಹಿಡಿಯಬೇಕು] ಎಂಬ ಶಬ್ದವನ್ನು 'ಮಾರಾವೆ' [ಕೊಲ್ಲಬೇಕು] ಎಂದು ತನ್ನ ಕೈಯಿಂದ ತಿದ್ದಿದ್ದಳು. ಅದು ಹೇಗಿದ್ದರೂ ಪೇಶವೆಯ ಸೇನೆ ಯಲ್ಲಿಯೂ ಸೇವಕರಲ್ಲಿಯೂ ದ್ರೋಹಬುದ್ಧಿಯನ್ನು ಹುಟ್ಟಿಸಿ, ಒಬ್ಬ ಬ್ರಾಹ್ಮಣ ರಾಜನನ್ನು ಕೊಂದ ದೋಷವು ರಘುನಾಥರಾಯನನ್ನು ತಟ್ಟದೆ ಬಿಡಲಿಲ್ಲ. ಈ ಪಾಪದ ಪ್ರಾಯಶ್ಚಿತ್ತಕ್ಕಾಗಿ ಸತ್ಯನಿಷ್ಠನೂ, ನಿರ್ಭಯನೂ ಆದ ನ್ಯಾಯಾಧೀಶ ರಾಮಶಾಸ್ತ್ರಿಯು ರಘುನಾಥರಾಯನನ್ನು ಕುರಿತು ಈ ಮೇರೆಗೆ ಹೇಳಿದನು:—

" ನಿಮಗೆ ಅಗ್ನಿಪ್ರವೇಶವೊಂದೇ ಪ್ರಾಯಶ್ಚಿತ್ತವು; ನೀವು ಬದುಕಿದ್ದು ಈ ಪಾಪ ವನ್ನು ಹೋಗಲಾಡಿಸಿಕೊಳ್ಳಲಾರಿರಿ; ಈ ಪ್ರಾಯಶ್ಚಿತ್ತವನ್ನು ಸ್ವೀಕರಿಸುವುದೇ ಇಹಪರಗಳಲ್ಲಿ ನಿಮಗೆ ಶ್ರೇಯಸ್ಕರವು. ಇಲ್ಲವಾದರೆ ನಿಮಗೂ ನಿಮ್ಮ ರಾಜ್ಯಕ್ಕೂ ಕಲ್ಯಾಣವಾಗದು. ನೀವು ಈ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಇಂದಿ ನಿಂದ ನಾನು ಈ ರಾಜ್ಯದ ಯಾವ ಕಾರ್ಯವನ್ನೂ ಮಾಡುವುದಿಲ್ಲ. ಮತ್ತು ನೀವು ಬದುಕಿರುವವರೆಗೆ ನಾನು ಪುಣೆಯಲ್ಲಿ ಕಾಲಿಡುವುದಿಲ್ಲ. "

ಮಹಾರಾಷ್ಟ್ರದ ಇತಿಹಾಸವನ್ನು ಬರೆದ ಗ್ರಾಂಟ್‌ಡಫ್ ಸಾಹೇಬನು ಬರೆದುದೇನೆಂದರೆ—" ರಾಮಶಾಸ್ತ್ರಿಯು ತನ್ನ ಉದಾಹರಣದಿಂದಲೇ ತನ್ನ ದೇಶದವರ ಮೇಲೆ ಎಲ್ಲರಿಗಿಂತ ಹೆಚ್ಚಿಗೆ ಉಪಕಾರಮಾಡಿರುವನು. ಆತನು ಮಾಡಿದ ಕಾರ್ಯಗಳಲ್ಲಿ ಸ್ವಲ್ಪ ದೋಷವೂ ಇಲ್ಲ. ಆತನು ನ್ಯಾಯವಿಚಾರಣೆಯಲ್ಲಿ ತೋರಿಸುತ್ತಿದ್ದ ಜಾಣ್ಮೆಯೂ ನಿಷ್ಪಕ್ಷಪಾತವೂ, ಕೆಲಸಮಾಡುವಲ್ಲಿ ತೋರಿಸುತ್ತಿದ್ದ ಉತ್ಸಾಹವೂ ನಿರ್ಭಯತೆಯೂ ಅಸಾಮಾನ್ಯವಾಗಿದ್ದುವು. ಪೇಶವೆಯ ಕೊಲೆಯಂತಹ ದೊಡ್ಡ ಒಳಸಂಚಿನ ಮೂಲಕಾರಣವಾದ ರಘುನಾಥರಾಯನ ಕಾಗದವನ್ನು ಇದ್ದಲ್ಲಿಂದ ಹೊರಹೊರಡಿಸಿ ತನ್ನ ವಶದಲ್ಲಿಟ್ಟುಕೊಂಡುದನ್ನು ನೋಡಿದರೆ ವೃದ್ಧ ರಾಮಶಾಸ್ತ್ರಿಯ ಸಾಮರ್ಥ್ಯವೂ ಉದ್ಯೋಗವೂ ಸ್ಪಷ್ಟವಾಗುವುವು. ತಾನು ಇನ್ನು ಮುಂದೆ ಎಲ್ಲಿ ವಾಸಮಾಡಬೇಕೆಂಬುದನ್ನು ಗೊತ್ತುಮಾಡಿಕೊಂಡೇ ಕೊನೆಯ ಬಾರಿಯೆಂದು ಆತನು ರಾಜಸಭೆಗೆ ಹೋಗಿದ್ದನು. ನಿಷ್ಪಕ್ಷಪಾತಿಯೂ, ನಿರ್ಲೋಭಿಯೂ, ದೃಢಚಿತ್ತನೂ, ಪವಿತ್ರಚರಿತ್ರನೂ ಆದ ರಾಮಶಾಸ್ತ್ರಿಯನ್ನು ಕಂಡು ಎಂತಹ ದೊಡ್ಡ ಮನುಷ್ಯನುಕೂಡ ಅಂಜುತ್ತಿದ್ದನು. ಧನವ್ಯಯದಲ್ಲಿ ಆತನು ಅತ್ಯಂತ ಮಿತಿಯುಳ್ಳವನು; ಮನೆಯಲ್ಲಿ ಒಂದು ದಿನಕ್ಕೆ ಬೇಕಾಗುವಷ್ಟಕ್ಕಿಂತ ಹೆಚ್ಚಿಗೆ ಸಂಗ್ರಹವನ್ನೇ ಮಾಡುತ್ತಿರಲಿಲ್ಲ. ಇಂತಹ ಸ್ವಾರ್ಥಪರಾಙ್ಮುಖಮನುಷ್ಯನನ್ನು ದ್ರವ್ಯದಾಶೆಯು ತೋರಿಸಿ, ಇಲ್ಲವೆ ಇನ್ನೊಬ್ಬರಿಂದ ಹೇಳಿಸಿ ಕರ್ತವ್ಯದ ಮಾರ್ಗದಿಂದ ಅಣುಮಾತ್ರವಾದರೂ ಕದಲಿಸುವುದು ಅಶಕ್ಯವೆಂಬ ಮಾತು ಸಿದ್ಧವಾಗಿ ಹೋಗಿದ್ದಿತು. "

---

ಮನಸ್ಸಿನ ದೊಡ್ಡತನ.

## ೪೨ ಯೂಬರ್ಟೋ.

ಭೂಮಧ್ಯಸಮುದ್ರದ ದಂಡೆಯಲ್ಲಿರುವ ಜಿನೋಆ ಎಂಬ ಪಟ್ಟಣವು ಪೂರ್ವಕಾಲದಲ್ಲಿ ವ್ಯಾಪಾರದಲ್ಲಿ ಹೆಸರಾದುದು. ಅಲ್ಲಿಯ ರಾಜ್ಯವ್ಯವಸ್ಥೆಯು ಶ್ರೀಮಂತರ ಕೈಯಲ್ಲಿದ್ದಿತು. ಆದರೆ ಒಮ್ಮೆ ಅಲ್ಲಿಯ ರಾಜ್ಯವ್ಯವಸ್ಥೆಯು ಲೋಕನಿಯುಕ್ತರಾದ ಸಾಮಾನ್ಯಜನರ ಕೈಯಲ್ಲಿ ಸೇರಿತು. ಈ ಸಾಮಾನ್ಯಜನರಲ್ಲಿ ಯೂಬರ್ಟೋ ಎಂಬ ವ್ಯಾಪಾರಿಯು ಮುಖ್ಯನು. ಆತನು ಮೊದಲಿಗೆ ಬಡವನು; ಜಾಣತನದಿಂದಲೂ ಉದ್ಯೋಗದಿಂದಲೂ ಸುಸ್ಥಿತಿಯನ್ನು ಪಡೆದಿದ್ದನು. ಕೆಲಕಾಲದ ತರುವಾಯ ಶ್ರೀಮಂತರು ಪ್ರಬಲರಾಗಿ ರಾಜ್ಯಾಧಿಕಾರವನ್ನು

ಮತ್ತೆ ಆಕ್ರಮಿಸಿದರು; ಮತ್ತು ಮುಂದೆಯೂ ತಮ್ಮ ಕೈಯೊಳಗಿನ ರಾಜ್ಯಾಧಿಕಾರವು ಸಾಮಾನ್ಯರ ಕೈಯು ಸೇರಬಾರದೆಂದು ಅವರ ಮುಂದಾಳುಗಳನ್ನು ಸೆರೆಹಿಡಿದು ಶಿಕ್ಷಿಸತೊಡಗಿದರು.

ಈ ಶಿಕ್ಷಿಸುವ ಕಾರ್ಯವನ್ನು ಅಡೋರ್ನೋ ಎಂಬ ಹೊಸ ಮಾಜಿಸ್ಟ್ರೇಟಸಿಗೆ ಒಪ್ಪಿಸಿದರು. ಆತನು ಯೂಬರ್ಟೋನಿನ ಮೇಲೆ ಆರೋಪಿಸಲ್ಪಟ್ಟ ರಾಜದ್ರೋಹದ ಅಪರಾಧಕ್ಕಾಗಿ ಆತನಿಗೆ ಗಡಿದಾಟಿಸುವ ಶಿಕ್ಷೆಯನ್ನು ವಿಧಿಸಿದನು. ಅಡೋರ್ನೋ, ಉದಾರಮನಸ್ಸಿನವನಾಗಿದ್ದರೂ ಹೊಸದಾಗಿ ಬಂದ ಅಧಿಕಾರದ ಮದದಿಂದ ಎಚ್ಚರದಪ್ಪಿದ್ದನು. ಆದುದರಿಂದ ಶಿಕ್ಷೆ ಹೇಳುವಾಗ—ಎಲೈ ನೀಚ ದರಿದ್ರ ಮನುಷ್ಯನೇ, ಜಿನೋಆ ಪಟ್ಟಣದ ಶ್ರೀಮಂತರನ್ನು ಕಾಲಕೆಳಗೆ ತುಳಿಯಬೇಕೆಂದು ಪ್ರಯತ್ನಿಸಿದ ನಿನ್ನ ತಪ್ಪಿಗೆ ದೊಡ್ಡ ಶಿಕ್ಷೆಯನ್ನು ಕೊಡಬೇಕಾದುದು ಯುಕ್ತವಾದರೂ ನಿನ್ನ ಮೇಲೆ ದಯೆದೋರಿ, ನಿನಗೆ ನಿನ್ನ ಮೊದಲಿನ ಸ್ಥಿತಿಯು ಬರುವಂತಹ ಶಿಕ್ಷೆಯನ್ನು ಮಾತ್ರ ವಿಧಿಸಿರುವೆನು ಎಂದು ಹೇಳಿದನು. ಯೂಬರ್ಟೋ, ಶಿಕ್ಷೆಯನ್ನು ಸಮಾಧಾನದಿಂದ ಕೇಳಿಕೊಂಡು—'ಮಾಜಿಸ್ಟ್ರೇಟ್ ಸಾಹೇಬರೇ, ತಾವು ನನ್ನ ಮೇಲೆ ಈ ಕಠಿನ ವಾಗ್ಬಾಣಗಳನ್ನು ಪ್ರಯೋಗಿಸಿದುದಕ್ಕಾಗಿ ಒಂದುವೇಳೆ ನಿಮಗೆ ಪಶ್ಚಾತ್ತಾಪಬಡುವ ಸಮಯವು ಬಂದೀತು;' ಎಂದು ಹೇಳಿ ಆತನು ಕೂಡಲೆ ನೇಪಲ್ಸ್‌ಪಟ್ಟಣಕ್ಕೆ ಹೊರಟುಹೋದನು. ಅಲ್ಲಿ ಯೂಬರ್ಟೋನಿನ ಸಾಲಗಾರರು ತಾವು ಕೊಡಬೇಕಾಗಿದ್ದ ಹಣವನ್ನು ಕೂಡಲೆ ಆತನಿಗೆ ಸಲಿಸಿದರು. ಯೂಬರ್ಟೋ, ಅಲ್ಲಿಂದ ಆರ್ಕಿಪೆಲಾಗೋ ದ್ವೀಪಕ್ಕೆ ಹೋಗಿ ಅಲ್ಲಿ ತನ್ನ ಜಾಣ್ಮೆಯಿಂದ ವ್ಯಾಪಾರದಲ್ಲಿ ಏಳಿಗೆಯನ್ನು ಹೊಂದಿ ಸುಖದಿಂದಿದ್ದನು.

ಟ್ಯೂನಿಸ್ ಎಂಬ ಪಟ್ಟಣದ ಜನರಿಗೂ, ಜಿನೋಆ ಸಂಸ್ಥಾನದ ಜನರಿಗೂ ಬಹಳ ವೈಮನಸ್ಯವುಂಟಾಗಿದ್ದಿತು. ಟ್ಯೂನಿಸದ ಜನರು ವ್ಹೇನಿಸ್ ಸಂಸ್ಥಾನದೊಡನೆ ಸಖ್ಯದಿಂದಿರುತ್ತಿದ್ದರು. ಯೂಬರ್ಟೋ ವಾಸವಾಗಿದ್ದ ಆರ್ಕಿಪೆಲಾಗೋ ದ್ವೀಪವು ವ್ಹೇನಿಸ್ ಸಂಸ್ಥಾನಕ್ಕೆ ಸೇರಿದುದು. ಟ್ಯೂನಿಸದ ಜನರು ಮುಸಲ್ಮಾನರು. ಅವರು ಜಿನೋಆ ಸಂಸ್ಥಾನದ ಕ್ರಿಸ್ತೀ ಜನರನ್ನು ಯುದ್ಧದಲ್ಲಾಗಲಿ, ಬೇರೆ ವಿಧದಲ್ಲಾಗಲಿ ಸೆರೆಹಿಡಿದು ದಾಸರನ್ನು ಮಾಡಿ ಮಾರುತ್ತಿದ್ದರು.

ಒಂದಾನೊಂದು ದಿವಸ ಅಡೋರ್ನೋರ್ ಸಾಹೇಬನ ಮಗನು ಹಡಗಿನಲ್ಲಿ ಕುಳಿತು ಒಂದು ಕೆಲಸಕ್ಕಾಗಿ ನೆರೆಯ ಬಂದರಕ್ಕೆ ಹೋಗುತ್ತಿದ್ದನು. ಆ ಹಡಗನ್ನು ಟ್ಯೂನಿಸದ ಜನರು ಹಿಡಿದು ವಶಪಡಿಸಿಕೊಂಡು ಅದರೊಳಗಿನ ಜನರನ್ನೆಲ್ಲ ದಾಸರನ್ನು ಮಾಡಿ ಮಾರಿದರು. ಆದುದರಿಂದ ಅಡೋರ್ನೋರ್ ಸಾಹೇಬನ ಮಗನೂ ಟ್ಯೂನಿಸ್ ಪಟ್ಟಣದಲ್ಲಿ ದಾಸನಾಗಿ ಇರಬೇಕಾಯಿತು.

ಯೂಬಟೋರ್, ಆಗಾಗ ಟ್ಯೂನಿಸ್ ಪಟ್ಟಣಕ್ಕೆ ತನ್ನ ವ್ಯಾಪಾರದ ನಿಮಿತ್ತದಿಂದ ಬರುತ್ತಿದ್ದನು. ಹಾಗೆ ಬಂದಾಗ ಒಮ್ಮೆ ಯೂಬಟೋರ್, ತನ್ನ ಒಬ್ಬ ಸ್ನೇಹಿತನ ಹೂದೋಟವನ್ನು ನೋಡಲು ಹೋಗಿದ್ದನು. ಅಲ್ಲಿ ಒಬ್ಬ ಕ್ರಿಸ್ತೀ ಹುಡುಗನು ಗುದ್ದಲಿಯಿಂದ ನೆಲವನ್ನು ಅಗಿಯುತ್ತಿರುವುದನ್ನು ನೋಡಿದನು. ಸುಖದಲ್ಲಿ ಬಳೆದ ಆ ಹುಡುಗನ ಕೋಮಲ ಶರೀರವನ್ನೂ, ಈಗ ಈ ಕಷ್ಟದ ಹೋರೆಯನ್ನು ಮಾಡುವುದಕ್ಕಾಗದೆ ಆತನು ಬಳಲಿ ಬೆಂಡಾಗಿ ಕಣ್ಣೀರಿಡುತ್ತಿರುವುದನ್ನೂ ಕಂಡು ಯೂಬಟೋರ್ ಕನಿಕರಬಟ್ಟು, ಆ ಹುಡುಗನ ಬಳಿಗೆ ಭಂದು ನೀನು ಯಾರು, ಇಲ್ಲಿ ಹೇಗೆ ಬಂದೆ ಎಂದು ಸಮಾಚಾರವನ್ನು ಕೇಳಿದನು. ಆ ಹುಡುಗನು ತಾನು ಜಿನೋಆ ಪಟ್ಟಣದ ಮಾಜಿಸ್ಟ್ರೇಟನ ಮಗನೆಂದೂ, ಟ್ಯೂನಿಸದ ಜನರು ಹಡಗಿನಲ್ಲಿ ಕುಳಿತಿದ್ದ ತನ್ನನ್ನು ಸೆರೆಹಿಡಿದು ತಂದು ದಾಸನನ್ನು ಮಾಡಿರುವರೆಂದೂ ಹೇಳಿದನು. ಯೂಬಟೋರ್, ಕೂಡಲೆ ಅಲ್ಲಿಂದ ಹೊರಟು ಆ ಹಡಗಿನ ಕಪ್ತನನ ಬಳಿಗೆ ಹೋಗಿ--ಇಂತಹ ಒಬ್ಬ ದಾಸನ ಬಿಡುಗಡೆ ಮಾಡುವುದಕ್ಕೆ ಎಷ್ಟು ಹಣವನ್ನು ಬೇಡುತ್ತೀರೆಂದು ಕೇಳಿದನು. ಕಪ್ತನನು–ಆ ಹುಡುಗನು ಶ್ರೀಮಂತರ ಮನೆಯವನಾಗಿರಬಹುದಾದುದರಿಂದ ಆತನ ಬಿಡುಗಡೆಗೆ ಐದು ಸಾವಿರ ರೂಪಾಯಿಗಳು ಬೇಕೆಂದು ಹೇಳಿದನು. ಯೂಬಟೋರ್, ಕೂಡಲೆ ಐದು ಸಾವಿರ ರೂಪಾಯಿಗಳನ್ನು ಆ ಕಪ್ತನನ ಕೈಯಲ್ಲಿ ಕೊಟ್ಟು ಬಿಡುಗಡೆಯ ಕಾಗದವನ್ನು ಪಡೆದುಕೊಂಡು ಆ ಹುಡುಗನಿಗಾಗಿ ಒಳ್ಳೆಯ ಉಡುಪನ್ನು ತೆಗೆದುಕೊಂಡು ಮತ್ತೆ ಆ ಹೂದೋಟಕ್ಕೆ ಬಂದನು. ಬಳಿಕ ಆ ಹುಡುಗನನ್ನು ಕಂಡು ತಮ್ಮಾ, ಈ ದಿನ ನಿನ್ನ ಬಿಡುಗಡೆಯಾಯಿತು; ಈ ಉಡುಪನ್ನು ಧರಿಸು; ನನ್ನ ಮನೆಗೆ ನಡೆ ಎಂದು ಹೇಳಿ ಆತನ ಕೈಕಾಲುಗಳಿಗೆ ತೊಡಿಸಿದ ಸೆರೆಯ ಸರಪಳಿಗಳನ್ನು ಬಿಚ್ಚಿಸಿ ತನ್ನ ಮನೆಗೆ ಕರೆತಂದನು. ಇದನ್ನು ನೋಡಿ ಆ ಹುಡುಗನಿಗೆ ಪರಮಾವಧಿಯ ಆಶ್ಚರ್ಯವೂ

ಆನಂದವೂ ಆದುವು. ಯೂಬಟೋರ್ಲ್, ಆ ಹುಡುಗನನ್ನು ತನ್ನ ಮನೆಯಲ್ಲಿ ಕೆಲವು ದಿವಸ ಪ್ರೀತಿಯಿಂದ ಹೊಟ್ಟೆಯ ಮಗನಂತೆ ನೋಡಿಕೊಂಡು ಇಟ್ಟು ಕೊಂಡನು. ಬಳಿಕ ಒಂದು ದಿವಸ ತಮ್ಮಾ, ಇನ್ನು ನೀನು ನಿನ್ನ ಊರಿಗೆ ನಡೆ; ನಿನ್ನನ್ನು ನಾನು ಇನ್ನೂ ಕೆಲವು ದಿವಸ ಇಟ್ಟುಕೊಳ್ಳಬೇಕೆಂದಿದ್ದರೂ ನೀನು ನಿನ್ನ ತಂದೆತಾಯಿಗಳನ್ನು ನೋಡಲು ತವಕಿಸುತ್ತಿರಬಹುದಾದುದರಿಂದ ನಿನ್ನನ್ನು ಜಿನೋಆ ಪಟ್ಟಣಕ್ಕೆ ಸುರಕ್ಷಿತವಾಗಿ ಕಳುಹುವ ವ್ಯವಸ್ಥೆಯನ್ನು ಮಾಡಿರುವೆನು ಎಂದು ಹೇಳಿ ದಾರಿಯ ವೆಚ್ಚಕ್ಕೆ ಕೆಲವು ಹಣವನ್ನು ಆತನ ಕೈಯಲ್ಲಿ ಕೊಟ್ಟು ಹೋಗಿ ಬಾರೆಂದು ಹೇಳಿದನು. ಆಗಲಾ ಹುಡುಗನು ಕೃತಜ್ಞತೆಯಿಂದ ತಲೆವಾಗಿ–ಮಹಾಶಯರೇ, ತಾವು ಅನಿಮಿತ್ತವಾಗಿ ನನ್ನ ಮೇಲೆ ಮಹೋಪಕಾರವನ್ನು ಮಾಡಿ ನನ್ನ ಬಿಡುಗಡೆ ಮಾಡಿದಿರಿ; ಹೊಟ್ಟೆಯ ಮಗನಿಗಿಂತ ಹೆಚ್ಚಾಗಿ ನನ್ನನ್ನು ಪ್ರೀತಿಸಿ ಸಲಹಿದಿರಿ; ಈ ಉಪಕಾರವನ್ನು ನಾನು ಈ ಜನ್ಮದಲ್ಲಿ ಹೇಗೆ ಮರೆಯಲಿ? ನನ್ನ ತಂದೆಯು ತಾವು ಯಾರೆಂದು ಕೇಳಿದರೆ ಏನ ಹೇಳಲಿ? ತಮ್ಮ ಉಪಕಾರದ ಮಹಾ ಭಾರವನ್ನು ಸ್ವಲ್ಪ ಹಗುರವಾಗಿ ಮಾಡಿಕೊಳ್ಳಲು ನನ್ನ ತಂದೆಗೆ ಆಸ್ಪದವನ್ನು ಕೊಡಿರಿ ಎಂದು ಕೇಳಿಕೊಂಡನು. ಆಗ ಯೂಬಟೋರ್ಲ್–ತಮ್ಮಾ ಈ ಪತ್ರವನ್ನು ನಿನ್ನ ತಂದೆಯವರಿಗೆ ಕೊಡು; ಎಲ್ಲವೂ ಇದರಿಂದ ತಿಳಿಯುವುದು ಎಂದು ಹೇಳಿ ಆ ಹುಡುಗನ ಕೈಯಲ್ಲಿ ಒಂದು ಪತ್ರವನ್ನು ಕೊಟ್ಟನು.

ಆ ಹುಡುಗನು ತಕ್ಕ ಸಮಯಕ್ಕೆ ಜಿನೋಆ ಪಟ್ಟಣಕ್ಕೆ ಬಂದು ತನ್ನ ಮನೆಗೆ ಹೋದನು. ತಂದೆಯು ಮಗನನ್ನು ಕಂಡೊಡನೆ ಆನಂದಸಾಗರದಲ್ಲಿ ಓಲಾಡಿದನು. ಒಬ್ಬನೇ ಮಗನು. ಅಂದು ಹಡಗಿನಲ್ಲಿ ಕುಳಿತು ಹೋದವನ ಸುದ್ದಿಯು ಇಂದಿಗೂ ಇಲ್ಲ. ಹಡಗು ಮಾಯವಾದುದರಿಂದ ಅದು ಸಮುದ್ರದಲ್ಲಿ ಮುಳುಗಿರಬಹುದೆಂದೂ, ತನ್ನ ಮಗನೂ ಸಾಗರದ ಒಡಲಿಗೆ ಆಹುತಿಯಾದನೆಂದೂ ಆಡೋರ್ನೋರ್ಲ್ ತಿಳಿದಿದ್ದನು. ಈಗ ಮಗನು ಸುರಕ್ಷಿತನಾಗಿ ಮನೆಗೆ ಬಂದುದನ್ನು ನೋಡಿ ಆತನಿಗೆ ಅತಿಶಯ–ಆನಂದವೂ ಆಶ್ಚರ್ಯವೂ ಆದುವೆಂದು ಹೇಳಬೇಕಾದುದಿಲ್ಲ. ತಂದೆಯು ಮಗನ ಸಮಾಚಾರವನ್ನೆಲ್ಲ ಕೇಳಿಕೊಂಡು ನಿನಗೆ ನಿರ್ವ್ಯಾಜವಾಗಿ ಸಹಾಯ ಮಾಡಿದ ಆ ಸದ್ಗೃಹಸ್ಥನು ಯಾರೆಂದು ಕೇಳಿ

ದನು. ಮಗನು ತಾನು ತಂದ ಒಂದು ಪತ್ರವನ್ನು ತಂದೆಯ ಕೈಯಲ್ಲಿ ಕೊಟ್ಟನು. ಆ ಪತ್ರದಲ್ಲಿ ಈ ಮೇರೆಗೆ ಬರೆದಿದ್ದಿತು:-

ಅಡೋನೋರ್ ಸಾಹೇಬರೇ, ಜಿನೋಅ ಪಟ್ಟಣದ 'ನೀಚ ದರಿದ್ರ' ಮನುಷ್ಯನು-ತನ್ನ ಮೇಲೆ ನೀವು ಮಾಡಿದ ಕಠೋರ ವಾಕ್ಪ್ರಹಾರಕ್ಕಾಗಿ ನಿಮಗೆ ಒಂದಾನೊಂದು ಕಾಲದಲ್ಲಿ ಪಶ್ಚಾತ್ತಾಪಬಡಬೇಕಾದೀತೆಂದು ಭವಿಷ್ಯ ಹೇಳಿದವನು-ಈ ದಿವಸ ತನ್ನ ಭವಿಷ್ಯವು ನಿಜವಾದುದಕ್ಕೆ ಸಂತೋಷಬಡುತ್ತಿದ್ದಾನೆ. ಎಲೈ, ಗರ್ವಿಷ್ಠನೇ, ಆ ಮನುಷ್ಯನೇ ನಿನ್ನ ಪ್ರೀತಿಯ ಏಕಪುತ್ರನನ್ನು ಯಾವ ಆಸೆಯನ್ನೂ ಹಿಡಿಯದೆ ದಾಸ್ಯದಿಂದ ಬಿಡುಗಡೆ ಮಾಡಿರುವನು. ಆ ಮನುಷ್ಯನು ಯಾರೆಂದರೆ, ನಿನ್ನಿಂದ ಗಡಿದಾಟಿಸಿದ ಶಿಕ್ಷೆಯನ್ನು ಹೊಂದಿದ—ಯೂಬರ್ಟೋರ್.

ಪತ್ರವನ್ನೋದಿದ ಬಳಿಕ ಅಡೋನೋರ್, ಬಹಳ ಹೊತ್ತು ಕೆಳಮೋರೆ ಮಾಡಿ ಸುಮ್ಮನೆ ಕುಳಿತುಬಿಟ್ಟನು. ನಾಚಿಕೆಯಿಂದಲೂ ಪಶ್ಚಾತ್ತಾಪದಿಂದಲೂ ಆತನ ಹೃದಯವು ಬೆಂದುಹೋಗಿದ್ದಿತು. ಮುಂದೆ ಆತನು ಯೂಬರ್ಟೋರ್ ಸಾಹೇಬನಿಗೆ ಕೊನೆಯವರೆಗೆ ಸ್ನೇಹದಿಂದಿರುವುದಕ್ಕಾಗಿ ವಿಜ್ಞಾಪನಾಪತ್ರವನ್ನು ಬರೆದು ರಾಜ್ಯಾಧಿಕಾರಿಗಳಿಗೆಲ್ಲ ಹೇಳಿಕೊಂಡು ಆತನ ಶಿಕ್ಷೆಯನ್ನು ತೆಗೆದುಹಾಕಿಸಿ ಜಿನೋಅ ಪಟ್ಟಣಕ್ಕೆ ಕರೆಯಿಸಿಕೊಂಡು ತಕ್ಕ ಸಂಮಾನವನ್ನು ಮಾಡಿದನು.

---

ಮಾಯೆಯ ಆಟ.

## ೪೩ ಶ್ರೀಕೃಷ್ಣನೂ ನಾರದನೂ.

ಒಂದಾನೊಂದು ದಿವಸ ದೇವರ್ಷಿ ನಾರದನು ದ್ವಾರಕೆಯಲ್ಲಿ ಶ್ರೀಕೃಷ್ಣನ ಅವತಾರಲೀಲೆಯನ್ನು ನೋಡಲೋಸುಗ ಹೋದನು. ದ್ವಾರಕೆಯು ಪ್ರಬಲ ಪರಾಕ್ರಮಿಗಳಾದ ಐವತ್ತಾರು ಕೋಟಿ ಯಾದವರ ಮಹಾಸಮೃದ್ಧಿಶಾಲಿಯಾದ ಸಾಮ್ರಾಜ್ಯದ ರಾಜಧಾನಿಯು. ಚಿನ್ನದ ಉಪ್ಪರಿಗೆಗಳು, ದೇವಲೋಕದ ಗಿಡಬಳ್ಳಿಗಳಿಂದ ಸೊಂಪಾದ ಉದ್ಯಾನಗಳು ಮೊದಲಾದುವುಗಳಿಂದ ದ್ವಾರಕೆಯು ಅಪೂರ್ವವಾದ ಶೋಭೆಯುಳ್ಳುದು. ಶ್ರೀಕೃಷ್ಣನಿಗೆ ಹದಿನಾರುಸಾವಿರ ಅರಮನೆಗಳು; ಒಂದು ಅರಮನೆಯಲ್ಲಿ ಆತನು ತನ್ನ ಅರಸಿಯಿಂದ ಪಾದಗಳನ್ನೊತ್ತಿಸಿಕೊಳ್ಳುವಲ್ಲಿ; ಇನ್ನೊಂದರಮನೆಯಲ್ಲಿ ಮತ್ತೊಬ್ಬ ಅರಸಿಯೊಡನೆ ಸರಸಸಲ್ಲಾಪ

ಗಳನ್ನಾಡುವುದರಲ್ಲಿ ಹೀಗೆ ಒಂದೊಂದು ಮನೆಯಲ್ಲಿ ಒಂದೊಂದು ಬಗೆಯಿಂದ ವಿಲಾಸಮಗ್ನನಾಗಿ ಹೋಗಿದ್ದಾನೆ. ಹೀಗೆ ಬಹುರೂಪಗಳಿಂದ ವಿಷಯಸುಖ ಲಂಪಟನಾಗಿದ್ದ ಶ್ರೀಕೃಷ್ಣನ ಸ್ಥಿತಿಯನ್ನು ಕಂಡು ನಾರದನು ಬೇಸರ ಗೊಂಡು ಮುಂದಿನ ಅರಮನೆಗೆ ಹೋಗಲು ಅಲ್ಲಿ ಆತನು ಯಾರ ದಾರಿಯನ್ನೋ ನೋಡುತ್ತ ಕುಳಿತಿರುವಂತೆ ಕಾಣಿಸಿತು. ಒಡನೆಯೆ ನಾರದನು ಒಳಹೊಕ್ಕು ಶ್ರೀಕೃಷ್ಣನನ್ನು ಸ್ತುತಿಸಿ ಆತನಿಂದ ಮನ್ನಣೆವಡೆದು—ಪ್ರಭುವೇ, ಎಷ್ಟು ದೊಡ್ಡ ಸಂಸಾರವನ್ನು ಹೂಡಿರುವೆ? ನಿನ್ನ ಈ ಸಂಸಾರಲಂಪಟತನವನ್ನು ನೋಡಲು ಸೋಜಿಗವಾಗುವುದು ಎಂದನು. ‘ ಏಕಮೇವಾದ್ವಿತೀಯಂ ’ ಎಂದೆನಿಸಿಕೊಂಡಿದ್ದರೂ, ‘ ಬಹು ’ ವಾಗುವುದಕ್ಕಾಗಿ ಲೋಕಸೃಷ್ಟಿಯನ್ನು ಮಾಡಿದ, ಸಮಸ್ತ ವಿಶ್ವಬ್ರಹ್ಮಾಂಡಗಳನ್ನು ಲೀಲೆಗಾಗಿ ಹೊರಗೆಡಹಿದ ಪರಮೇಶ್ವರನು—ಅಯ್ಯಾ ನಾರದನೇ, ಇದೆಲ್ಲವೂ ಮಾಯೆಯ ಆಟವು ಎಂದು ಉತ್ತರವಿತ್ತನು. ಅದಕ್ಕೆ ನಾರದನು—ಪ್ರಭುವೇ, ಮಾಯೆಯ ಆಟವು ನಿನ್ನ ಮೇಲೆಯೂ ನಡೆಯ ಬೇಕೇ? ನಾನೆಂದೂ ಮಾಯೆಗೊಳಗಾಗಲಾರೆನು ಎಂದನು. ಆಗ ಶ್ರೀಕೃಷ್ಣನು—ಅದು ಹೇಗಾದರೂ ಇರಲಿ, ಬಹುದಿವಸಕ್ಕೆ ಬಂದಿರುವೆ; ಅತ್ತಿತ್ತ ಸ್ವಲ್ಪ ತಿರುಗಾಡಿ ಬರುವ ನಡೆ ಎಂದು ಹೇಳಿ ನಾರದನನ್ನು ಕರೆದುಕೊಂಡು ಊರ ಹೊರಗೆ ನಡೆದನು. ನಾರದನು ಹರ್ಷಬಟ್ಟು ಶ್ರೀಕೃಷ್ಣನ ಸಂಗಡ ತಿರು ಗಾಡುತ್ತ ನಡೆದನು. ಇಬ್ಬರೂ ಸಮೀಪದ ಒಂದು ಬನವನ್ನು ಸೇರಿದರು. ಆಗ ಶ್ರೀಕೃಷ್ಣನು ನಾರದನನ್ನು ಕುರಿತು—ನಾರದಾ, ನೀರಡಿಸಿದ್ದೇನೆ; ಸ್ವಲ್ಪ ನೀರನ್ನು ಹುಡುಕಿ ತಂದುಕೊಡುವೆಯಾ ಎಂದು ಕೇಳಿದನು. ಸ್ವಲ್ಪ ದೂರದಲ್ಲಿ ಸರೋವರವಿರುವುದನ್ನು ನಾರದನು ತಿಳಿದು ಕೃಷ್ಣನನ್ನು ಕುಳ್ಳಿರಹೇಳಿ ಮುಂದು ವರಿದು ಬಂದು ನೋಡುವಷ್ಟರಲ್ಲಿ ಆ ಸರೋವರವು ಎದುರಿಗೆ ಕಾಣಿಸಿತು. ಅದರ ದಂಡೆಯಲ್ಲಿ ಪರಮಸುಂದರಿಯಾದ ಒಬ್ಬ ತರುಣಿಯು ನಿಂತಿದ್ದಳು ಮಂತ್ರಹಾಕಿದವರಂತೆ ನಾರದನು ಸುಮ್ಮನೆ ಎವೆಯಿಕ್ಕದೆ ಆಕೆಯನ್ನು ನೋಡುತ್ತ ನಿಂತನು. ಆಗಲಾ ತರುಣಿಯು—ನಾನು ವನದೇವಿಯು; ನನ್ನ ಮದುವೆಯಾಗಿಲ್ಲ; ಈ ಸರೋವರದ ಬಳಿಗೆ ಇಂದು ಬಂದ ಮುನಿಶ್ರೇಷ್ಠನೊಡನೆ ನಿನ್ನ ಮದುವೆಯಾಗುವುದೆಂದು ಆಕಾಶವಾಣಿಯಾಗಿದೆ; ಎಂದು ನುಡಿದಳು. ಚೆಲ್ವಿಕೆಗೆ ಮನಸೋತ ನಾರದನು ಶ್ರೀಕೃಷ್ಣನಿಗೆ ನೀರನ್ನೊಯ್ಯಬೇಕಾಗಿದೆಯೆಂಬುದನ್ನು

ಮರೆತುಬಿಟ್ಟನು; ಮತ್ತು ತಾನೇ ಆ ಮುನಿಶ್ರೇಷ್ಠನೆಂದು ಬಗೆದು ಆ ತರುಣಿಯು ತನ್ನನ್ನು ಮದುವೆಯಾಗಬೇಕೆಂಬ ಮಾತನ್ನೆತ್ತಿದನು. ಆಗ ಅವರಿಬ್ಬರಿಗೂ ಗಂಧರ್ವವಿಧಿಯಿಂದ ಮದುವೆಯಾಯಿತು. ಹತ್ತೆಂಟು ವರ್ಷಗಳು ಹತ್ತೆಂಟು ದಿವಸಗಳಂತೆ ಕಳೆದುಹೋದುವು. ನಾಲ್ಕಾರು ಮಕ್ಕಳು ಹುಟ್ಟಿದರು. ನಾರದನು ಒಂದು ಊರಲ್ಲಿ ಸಂಸಾರವನ್ನು ಹೂಡಿ ನೆರೆಹೊರೆಯ ಗ್ರಾಮಗಳಿಗೆ ಹೋಗಿ ಪರಮೇಶ್ವರನ ನಾಮಗಾನಮಾಡಿ ದುಡ್ಡುಕಾಸುಗಳನ್ನು ದೊರಕಿಸತೊಡಗಿದನು. ಒಮ್ಮೆ ತನ್ನ ಊರಲ್ಲಿ ಬಂದ ಮಾರಿಯ ಪಿಡುಗಿಗೆ ಅಂಜಿ ಹೆಂಡತಿಮಕ್ಕಳನ್ನು ಕಟ್ಟಿಕೊಂಡು ನೆರೆಯೂರಿಗೆ ಹೊರಟನು. ತಲೆಯ ಮೇಲೆ ಕೂಸು ಮಲಗಿದ ತೊಟ್ಟಿಲು, ಸೊಂಟದ ಮೇಲೆ ಎರಡು ಬದಿಗೆ ಎರಡು ಮಕ್ಕಳು, ಹಿಂದೆ ಅರಿವೆ ಅಂಚಡಿ ಪಾತ್ರೆಪಡಗಗಳ ಗಂಟನ್ನು ತಲೆಯ ಮೇಲೆ ಹೊತ್ತುಕೊಂಡು ಎರಡೂ ಕೈಗಳಲ್ಲಿ ಇಬ್ಬರು ಮಕ್ಕಳನ್ನು ಹಿಡಿದುಕೊಂಡು ಹೆಂಡತಿ ಬರುತ್ತಿದ್ದಾಳೆ. ನಾರದನು ಮುಂದೆ ಬಂದ ಹೊಳೆಯನ್ನು ದಾಟುತ್ತಿದ್ದನು. ಪಾತ್ರೆಯಲ್ಲಿ ಮುಂದುವರಿಯುವಾಗ ಒಮ್ಮೆಲೆ ಮಹಾಪೂರವು ಬರಲು ಕೂಸು, ಹೆಂಡತಿ, ಮಕ್ಕಳು, ಎಲ್ಲರೂ ತೇಲಿಹೋದರು. ನಾರದನು ಕಂಗೆಟ್ಟು ಆಕ್ರೋಶಮಾಡಿ ಅಳತೊಡಗಿದನು. ಆ ದುಃಖದ ಸಮಯದಲ್ಲಿ ನಾರದನ ಅಂತಃಕರಣದ ಹರಿಭಕ್ತಿಯು ಜಾಗ್ರತವಾಯಿತು. ಗುರುತಿನ ಒಂದು ಮಧುರಧ್ವನಿಯು ತನ್ನನ್ನು ಸಮಾಧಾನಗೊಳಿಸುತ್ತಿರುವಂತೆ ಭಾಸವಾಯಿತು. ಮತ್ತೆ—ವತ್ಸಾ ನಾರದಾ, ನನ್ನ ಬಳಿಗೆ ಬಾರಯ್ಯಾ ಎಂದು ಪ್ರೀತಿಯಿಂದ ಕರೆಯುತ್ತಿರುವುದು ಕೇಳಬಂದಿತು. ನಾರದನು ಬಳಿಯಲ್ಲಿ ಯಾರನ್ನೂ ಕಾಣದೆ ಬೆರಗಾಗಿ ಯಾರು ನನ್ನನ್ನು ಕರೆಯುವವರು, ದೀನದಯಾಳೂ, ಮೈದೋರು ಎಂದು ದೈನ್ಯದಿಂದ ಬೇಡಿಕೊಂಡನು. ಆಗಲೇ ನಾರದನಿಗೆ ತನ್ನ ಮೈಮೇಲೆ ಯಾರೋ ಮೆಲ್ಲನೆ ಕೈಯಾಡಿಸುತ್ತಿರುವಂತೆ ತೋರಿತು. ನೋಡುತ್ತಾನೆ—ಎದುರಿಗೆ ನಗುಮೊಗದ ಶ್ರೀಕೃಷ್ಣನು!

ಶ್ರೀಕೃಷ್ಣನು ನಾರದನನ್ನು ಕುರಿತು—ಮಾಯೆಯ ಆಟವನ್ನು ಈಗಲಾದರೂ ನೋಡಿದೆಯಾ? ಆ ನಿನ್ನ ತರುಣಿಯೂ ಆ ನಿನ್ನ ಮಕ್ಕಳುಮರಿಗಳೂ ಆ ಕೂಸೂ ಈ ಎಲ್ಲವನ್ನೂ ನಾನೇ ನನ್ನ ಮಾಯೆಯಿಂದ ತೋರ್ಪಡಿಸಿದವನು ಎಲ್ಲವೂ ಮಾಯೆಯ ಆಟವು, ಎಂದು ಉಪದೇಶಿಸಿದನು.

---

ರಾಜಭಕ್ತಿ.

## ೪೪ ಜಪಾನದ ಒಬ್ಬ ಅಪರಾಧಿ.

'ರೂಸೋಜಪಾನ' ಯುದ್ಧವು ನಡೆದಾಗ (೧೯೦೫) ಒಂದು ದಿವಸ ಸೆರೆಮನೆಯ ಅಧಿಕಾರಿಯು ಒಬ್ಬ ಕೊಲೆಯ ಅಪರಾಧಿಯು ನಾಳೆ ದೇಹಾಂತ ಶಿಕ್ಷೆಯನ್ನು ಹೊಂದುವನೆಂದಿರುವಾಗ ಈ ದಿವಸ ತನ್ನ ಜೇಬಿನಲ್ಲಿದ್ದ ಕೆಲವು ರೂಪಾಯಿಗಳನ್ನು ಆತನ ಕೈಯಲ್ಲಿಟ್ಟು ನೀನು ಈ ದಿನ ಈ ಹಣದಿಂದ ಮನ ಬಂದಂತೆ ಇಚ್ಛಾಭೋಜನ ಮಾಡೆಂದು ಹೇಳಿದನು. ಕೊಲೆಗಾರನು ಆ ಹಣ ವನ್ನು ಮರಳಿ ಅಧಿಕಾರಿಯ ಕೈಯಲ್ಲಿಟ್ಟು—ಈ ಹಣವನ್ನು ಯುದ್ಧದಲ್ಲಿ ಗಾಯ ಹೊಂದಿದವರ ಶುಶ್ರೂಷೆಗಾಗಿ ಕೂಡಿಸಿದ ಹಣಕ್ಕೆ ಸೇರಿಸುವಂತೆ ಹೇಳಿ ಕಳು ಹಿರಿ. ನಾನು ನನ್ನ ಕರ್ಮದೋಷದಿಂದ ಸಮ್ರಾಜನಿಗಾಗಿ ಯುದ್ಧವನ್ನುಮಾಡಿ ಕೃತಾರ್ಥನಾಗುವ ಯೋಗವನ್ನು ಕಳೆದುಕೊಂಡೆನಲ್ಲಾ; ಈ ಜನ್ಮದ ಆ ವಾಸ ನೆಯು ಹಾಗೆಯೇ ಉಳಿದುಹೋಯಿತು ಎಂದು ವಿಷಾದವನ್ನು ತೋರ್ಪಡಿ ಸಿದನು.

---

ಮನಸ್ಸಿನ ಪ್ರಸನ್ನತೆ.

## ೪೫ ಅಲೆಕ್ಸಂದರನ ದಳವಾಯಿ.

ದಿಗ್ವಿಜಯಿಯಾದ ಅಲೆಕ್ಸಂದರನು ತನ್ನ ಒಬ್ಬ ದಳವಾಯಿಗೆ ನಿಷ್ಕಾರಣ ವಾಗಿ ಮುನಿದು ಆತನನ್ನು ಕೆಳಗಿನ ಸುಬೇದಾರನನ್ನಾಗಿ ಮಾಡಿದನು. ಕೆಲವು ದಿವಸಗಳ ತರುವಾಯ ಆತನನ್ನು ಕರೆಕಳುಹಿ ನೋಡಲು ಆತನು ಎಂದಿನಂತೆ ಹೃಷ್ಟಚಿತ್ತನಾಗಿಯೇ ಇದ್ದನು. ಬಾದಶಹನು–ಮೊದಲಿನಂತೆ ಹರ್ಷವುಳ್ಳವ ನಾಗಿಯೇ ಕಾಣಿಸುತ್ತಿರುವೆ; ಹೊಸ ಕೆಲಸಕ್ಕೆ ಮನಸ್ಸು ಒಗ್ಗಿದೆಯೇ ಎಂದು ಕೇಳಿದನು. ಆಗಲವನು—ಚೆನ್ನಾಗಿ ಒಗ್ಗಿದೆ; ದಂಡಿನೊಳಗಿನ ಸುಬೇದಾರರೆಲ್ಲ ಈಗ ನನ್ನನ್ನು ನಿಜವಾಗಿ ಪ್ರೀತಿಸುವರು; ಯಾವಾಗಲೂ ನನ್ನ ಸುಖದುಃಖ ಗಳಲ್ಲಿ ಸಹಾನುಭೂತಿಯುಳ್ಳವರಾಗಿ ಸ್ನೇಹಿತರಾಗಿರುವರು. ದಂಡಾಳುಗಳು ಮೊದಲು ನನ್ನನ್ನು ಕಂಡರೆ ದೂರ ಸರಿದು ನನ್ನೊಡನೆ ಮಾತನಾಡುವುದಕ್ಕೂ ಸಂಕೋಚಪಡುತ್ತಿದ್ದರು. ಈಗ ಅವರೂ ನನ್ನನ್ನು ತಮ್ಮವನನ್ನಾಗಿಯೇ ತಿಳಿ ಯುತ್ತಿರುವರು. ಮಹಾಸ್ವಾಮೀ, ಹಲವರು ತನ್ನನ್ನು ಪ್ರೀತಿಸುವುದರಲ್ಲಿಯೇ ಮನುಷ್ಯನಿಗೆ ಸುಖವುಂಟು ಎಂದು ಉತ್ತರವಿತ್ತನು. ಮತ್ತೆ ಬಾದಶಹನು—

ಕೆಳಗಿನ ಸ್ಥಳಕ್ಕೆ ಹಾಕಿದ್ದರಿಂದ ನಿನ್ನ ಮರ್ಯಾದೆಯು ಕುಗ್ಗಲಿಲ್ಲವೇ ಎನ್ನಲು ಅವನು—ಮರ್ಯಾದೆಯು ಮನುಷ್ಯನಿಗಲ್ಲದೆ ಸ್ಥಳಕ್ಕೆ ಅಲ್ಲ; ಯಾವನು ತನಗೆ ನಿಯಮಿಸಿದ ಕಾರ್ಯವನ್ನು ಮಾಡಿ ಹೆರವರಿಗೆ ನೆರವಾಗುವನೋ ಆತನನ್ನು ಎಲ್ಲರೂ ಒಳ್ಳೆಯ ಮನುಷ್ಯನೆಂದು ಹೇಳುವರು; ಒಳ್ಳೆಯ ಮನುಷ್ಯನೆಂದೆನಿಸಿ ಕೊಳ್ಳುವುದೇ ಲೋಕದಲ್ಲಿ ಹೆಚ್ಚಿನ ಮರ್ಯಾದೆಯು; ಮಂತ್ರಿಪದದಲ್ಲಿದ್ದವನು ಕೂಡ ಮುಚ್ಚುಗಾಣಿಕೆಗೆ, ಇಲ್ಲವೆ ಲಂಚಕ್ಕೆ ಕೈಯೊಡ್ಡುವನೆಂದು ತಿಳಿದುಬಂದರೆ ಜನರು ಆತನನ್ನು ಒಬ್ಬ ನಂಬಿಗೆಯ ಸಿಪಾಯಿಗಿಂತ ಕೀಳನನ್ನಾಗಿ ಭಾವಿಸುವರು. ಎಂದು ಹೇಳಿದನು.

ಕೀಳುಬಾಳುವೆಯನ್ನು ಕಳೆದುಕೊಳ್ಳುವುದಕ್ಕೆ ಹೆಣಗುವುದು ಬೇಕು. ಆದರೆ ಮನಸ್ಸಿನ ಹರ್ಷವನ್ನು ಕಳೆದುಕೊಳ್ಳುವುದು ಬೇಡ.

---

ಸ್ವಾಮಿಭಕ್ತಿ.

## ೪೬ ಆಸ್ಟ್ರಿಯದ ಒಬ್ಬ ಸಿಪಾಯಿ.

ಆಸ್ಟ್ರಿಯಾದೇಶದಲ್ಲಿ ಕಾರ್ಪೇಥಿಯನ್ ಪರ್ವತದ ನೆರೆಯಲ್ಲಿ ಪೂರ್ವಕಾಲದಲ್ಲಿ ತೋಳಗಳ ಕಾಟವು ಅತಿಶಯವಾಗಿತ್ತು. ಕ್ರಿ. ೧೭೭೮ರಲ್ಲಿ ಒಬ್ಬ ಸರದಾರನು ತನ್ನ ರಥದಮೇಲೆ ಕುಳಿತುಕೊಂಡು ವ್ಹಿಎನ್ನಾ ಪಟ್ಟಣದಿಂದ ಕ್ರಾಕೋ ಪಟ್ಟಣಕ್ಕೆ ನಡೆದಿದ್ದನು. ಆಗ ಅವನ ರಥವನ್ನು ಬೆಂಬತ್ತಿ ಕೆಲವು ತೋಳಗಳು ಧಾವಿಸುತ್ತ ಬಂದುವು. ಈ ಸರದಾರನ ಸಂಗಡ ಕುದುರೆಗಳನ್ನೇರಿದ ಇಬ್ಬರು ಸಿಪಾಯಿಗಳಿದ್ದರು. ಕ್ರಾಕೋಪಟ್ಟಣವನ್ನು ಮುಟ್ಟುವದಕ್ಕೆ ಮುಂಚೆಯೇ ತೋಳಗಳು ತಮ್ಮನ್ನು ಹಿಡಿಯಬಹುದೆಂದು ತೋರಿದುದರಿಂದ ಆ ಸರದಾರನು ಸಮೀಪದ ಝೋಟರ್ ಪಟ್ಟಣದ ಕಡೆಗೆ ತಿರುಗಿದನು. ಮತ್ತು ತನ್ನ ನಂಬಿಗೆಯ ಸಿಪಾಯಿಯನ್ನು ರಥದ ಹಿಂದೆಯೂ ಇನ್ನೊಬ್ಬನನ್ನು ಮುಂದೆಯೂ ಸಾಗುವಂತೆ ಹೇಳಿದನು. ಝೋಟರ್ ಪಟ್ಟಣವನ್ನು ಮುಟ್ಟುವುದಕ್ಕೆ ಮೊದಲೇ ತೋಳಗಳು ತಮ್ಮನ್ನು ಆಕ್ರಮಿಸುವುವೆಂದು ಮತ್ತೆ ಕಂಡು ಬಂದುದರಿಂದ ಹಿಂದೆ ಬರುತ್ತಿದ್ದ ಸಿಪಾಯಿಯು ಸರದಾರನನ್ನು ಕುರಿತು—ತಮ್ಮ ಅಪ್ಪಣೆಯಾದರೆ ನನ್ನ ಕುದುರೆಯನ್ನು ತೋಳಗಳಿಗೆ ಬಲಿಗೊಡುವೆನು; ಅವು ಅದನ್ನು ತಿನ್ನುವುದರಲ್ಲಿ ತೊಡಗಿರುವಾಗಲೇ ನಾವು ಪಟ್ಟಣವನ್ನು ಸೇರಬಹುದು ಎಂದು ಬಿನ್ನಯಿಸಿ

ದನು. ಸರದಾರನು ಒಪ್ಪಿದನು. ಸಿಪಾಯಿಯು ಕುದುರೆಯಿಂದಿಳಿದು ತಾನು ರಥದ ಹಿಂದೆ ಕುಳಿತುಕೊಂಡನು. ತೋಳಗಳು ಕುದುರೆಯನ್ನು ಸ್ವಲ್ಪ ವೇಳೆಯಲ್ಲಿ ತೀರಿಸಿ ಮತ್ತೆ ರಥವನ್ನು ಬೆನ್ನಟ್ಟಿದುವು. ರಥವು ವಾಯುವೇಗದಿಂದ ಸಾಗಿದೆ. ಆದರೆ ರಥದ ಕುದುರೆಗಳು ದಣಿದುದರಿಂದ ಇನ್ನು ತೋಳಗಳ ಆಕ್ರಮಣವನ್ನು ತಪ್ಪಿಸುವದು ಅಶಕ್ಯವೆಂದು ಹಿಂದಿನ ಸಿಪಾಯಿಯು ಮನಗಂಡು ಸರದಾರನನ್ನು ಕುರಿತು— ಒಡೆಯರೇ, ಕುದುರೆಯ ಸಮಿಪತ್ತಿದ ತೋಳಗಳು ಬಲು ಸಮೀಪಿಸಿದುವು; ಇನ್ನು ಬೇರೆ ಉಪಾಯವಿಲ್ಲ; ನನ್ನ ಹೆಂಡಿರು ಮಕ್ಕಳನ್ನು ತಾವು ತಂದೆಯಂತೆ ಸಲಹು ವಿರಾದರೆ ನಾನು ನಿಮ್ಮ ಸಲುವಾಗಿ ತೋಳಗಳಿಗೆ ಬಲಿಯಾಗುವೆನು; ಇದು ವಿಚಾರದ ಸಮಯವಲ್ಲ; ತೀವ್ರ ಅಪ್ಪಣೆ ಕೊಡಿರಿ ಎಂದು ಕೇಳಲು ಸರ ದಾರನು— ಈ ವಿಚಾರವನ್ನು ಮೊದಲು ಮನಸ್ಸು ಒಪ್ಪದಿದ್ದರೂ ಕ್ಷಣದಲ್ಲಿ ಎಲ್ಲರೂ ತೋಳಗಳಿಗೆ ಬಲಿಯಾಗುವೆವೆಂದು ಕಾಣಬಂದುದರಿಂದ ಉಪಾಯ ಗಾಣದೆ ಆ ಸಿಪಾಯಿಯ ಬಿನ್ನಹದ ಮೇರೆಗೆ ಆತನ ಹೆಂಡಿರು ಮಕ್ಕಳನ್ನು ಸಲಹುವ ಪ್ರತಿಜ್ಞೆಯನ್ನು ಮಾಡಿ ಬಹು ಕಷ್ಟದಿಂದ ಆತನ ಮಾತಿಗೆ ಒಪ್ಪಿಗೆಯನ್ನಿತ್ತನು. ಕೂಡಲೆ ಆ ಸಿಪಾಯಿಯು ರಥದಿಂದ ಕೆಳಗೆ ಹಾರಿದನು. ತೋಳಗಳು ಆತನನ್ನು ಮುಗಿಸುವ ಪೂರ್ವದಲ್ಲಿ ಸರದಾರನ ರಥವು ಝೋಟರ್ ಪಟ್ಟಣದ ಅಗಸೆಯನ್ನು ಹೊಕ್ಕಿತು. ಉಳಿದವರು ಬದುಕಿದರು. ಮುಂದೆ ಸರದಾರನು ತನ್ನ ಪ್ರತಿಜ್ಞೆಯಂತೆ ನಡೆದನು.

ಭರತಖಂಡದಲ್ಲಿ ಪ್ರಾಚೀನ ಕಾಲದಿಂದ ಶ್ರೇಷ್ಠ ಸ್ವಾಮಿಭಕ್ತರು ಜನ್ಮ ವೆತ್ತುತ್ತ ಬಂದಿರುವರು. ಮಾರುತಿಯಂತಹ ಸ್ವಾಮಿಭಕ್ತನು ಯಾವ ಕಾಲ ದಲ್ಲಿಯೂ ಯಾವ ದೇಶದಲ್ಲಿಯೂ ಅವತರಿಸಿಲ್ಲ. ಸುಮಾರು ೧೦೦ ವರ್ಷಗಳ ಹಿಂದೆ ಪುಣೆಯ ಅರಮನೆಯಲ್ಲಿ ಪೇಶವೆನಾರಾಯಣರಾಯನ ಕೊಲೆಯಾದಾಗ ಟೀಳೇಕರ ಚಂಪಾಜಿಯೆಂಬ ಸೇವಕನು ತನ್ನ ಒಡೆಯನ ಕೊಲೆಯನ್ನು ನೋಡ ಲಾರದೆ ಮೊದಲು ತಾನೇ ಕೊಲೆಗಾರರ ಕತ್ತಿಗೆ ತುತ್ತಾಗಿ ತನ್ನ ಉಜ್ವಲ ಸ್ವಾಮಿ ಭಕ್ತಿಯನ್ನು ಪ್ರಕಟಿಸಿದನು. ಇಂತಹ ಹಲವು ಉದಾಹರಣೆಗಳನ್ನು ಭಾರ ತೀಯ— ಇತಿಹಾಸದಲ್ಲಿ ಕಾಣಬಹುದು.

———

ದೊಡ್ಡತನ.

## ೪೭ ಲೇಡಿ ವ್ಹಿಲಾಸರ್ಫ್.

ಯುರೋಪಿಯನರಲ್ಲಿ ಮದುವೆಯಾಗುವುದಕ್ಕೆ ಮೊದಲು ವಧೂವರರಲ್ಲಿ ಪರಸ್ಪರ ಪ್ರೇಮವು ಉಂಟಾದರೆ, ಮುಂದೆ ಅಡ್ಡಿಯೇನೂ ಒದಗದಿದ್ದರೆ ಅವರ ಮದುವೆಯಾಗುವ ವಾಡಿಕೆಯುಂಟು. ಆ ಉಂಟಾಗುವ ಪ್ರೇಮದ ಪರೀಕ್ಷೆಗಾಗಿ ವಧೂವರರಲ್ಲಿ ಆಹಾರ ಸಂಭಾಷಣ ಮೊದಲಾದ ಬಳಕೆಯಾಗುವುದುಂಟು.

ಪಾರಿಸ್‌ಪಟ್ಟಣದಲ್ಲಿದ್ದ ವ್ಹಿಲಾಸರ್ಫ್ ಎಂಬ ಅತ್ಯಂತ ಸುಂದರಿಯಾದ ಒಬ್ಬ ವಧುವಿಗೂ, ಅದೇ ಪಟ್ಟಣದ ಫೇಸ್ಟ್ರೋ ಎಂಬ ಪ್ರಸಿದ್ಧ-ಶಸ್ತ್ರವೈದ್ಯ ನಿಗೂ ಹೀಗೆ ಪರಸ್ಪರ ಪ್ರೇಮವುಂಟಾಯಿತು. ಆದರೆ ಇವರಿಬ್ಬರು ಯೋಗ್ಯತೆ ಯಲ್ಲಿ ಸಮಾನರಲ್ಲವೆಂಬುದು ಇವರ ಮದುವೆಗೆ ಅಡ್ಡಿಯಾಯಿತು. ಆದುದ ರಿಂದ ಫೇಸ್ಟ್ರೋ, ವ್ಹಿಲಾಸರ್ಫಳ ಹಂಬಲವನ್ನು ತೊರೆದು ಅವಳ ಮರವಾಗಬೇ ಕೆಂದು ಅವಳ ಮನೆಗೆ ಹೋಗುವದು ಮೊದಲಾದ ಬಳಕೆಯನ್ನು ನಿಲ್ಲಿಸಿಬಿಟ್ಟನು. ಹೀಗೆ ಹಲವು ವರ್ಷಗಳು ಕ್ರಮಿಸಿಹೋದುವು. ಮುಂದೆ ಒಮ್ಮೆ ವ್ಹಿಲಾಸರ್ಫಳು ಒಂದು ರೋಗದಿಂದ ಪೀಡಿತೆಯಾದಳು. ಆಗ ಆಕೆ ತನ್ನದೊಂದು ನರವನ್ನು ಕೊಯ್ಯಿಸಬೇಕಾಯಿತು. ಈ ಕೆಲಸವು ಫೇಸ್ಟ್ರೋವಿಗೆ ಒಪ್ಪಿಸಲ್ಪಟ್ಟಿತು. ಫೇಸ್ಟ್ರೋ ಪ್ಪೈಮರೆತು, ಕೊಯ್ಯಬೇಕಾದ ನರವನ್ನು ಬಿಟ್ಟು ಮತ್ತೊಂದು ನರವನ್ನು ಕೊಯ್ದುಬಿಟ್ಟನು. ಈ ದೊಡ್ಡ ತಪ್ಪಿನಿಂದ ವ್ಹಿಲಾಸರ್ಫಳು ಎರಡು ಮೂರು ದಿವಸಗಳಲ್ಲಿ ಮರಣಹೊಂದುವುದು ನಿಶ್ಚಿತವಾಯಿತು. ಆದರೆ ಆಕೆಯು ತನ್ನ ಮನಸ್ಸನ್ನು ಸ್ವಲ್ಪವೂ ಕದಲಗೊಡಲಿಲ್ಲ. ಮೂರು ದಿವಸಗಳ ತರುವಾಯ ಹಿಂದೆ ಆದ ತಪ್ಪಿನಿಂದ ಆಕೆಯ ಇಡಿ ಕೈಯನ್ನೇ ಕೊಯ್ಯಬೇಕಾಯಿತು. ಆಗ ವ್ಹಿಲಾ ಸರ್ಫಳು ಫೇಸ್ಟ್ರೋವಿನ ಮೇಲೆ ತನ್ನ ಮನಸ್ಸಿನಲ್ಲಿ ಕೋಪವೇನೂ ಇಲ್ಲವೆಂಬು ದನ್ನು ತೋರ್ಪಡಿಸುವುದಕ್ಕಾಗಿ ಆತನನ್ನು ಕರೆದು—ಮತ್ತೆ ತಮ್ಮ ಸಹಾಯವು ಬೇಕಾದರೆ ತಾವು ದಯಮಾಡಿ ಬರಬೇಕೆಂದು ಬಿನ್ನಯಿಸಿದಳು. ಇನ್ನು ಆಕೆಯು ೨೪ ಘಂಟೆ ಕಾಲದೊಳಗೆ ಮಡಿಯುವಳೆಂದು ಆಗ ಫೇಸ್ಟ್ರೋವಿಗೆ ಕಾಣ ಬರಲು ಆತನು ತನ್ನ ತಪ್ಪಿಗಾಗಿ ಮರಮರನೆ ಮರುಗಿ ಮನಸ್ಸಿನಲ್ಲಿ ಬಹಳವಾಗಿ ನೊಂದುಕೊಂಡು ಕೆಳಮೋರೆ ಮಾಡಿದನು. ಆದರೆ ದೊಡ್ಡ ಮನಸ್ಸಿನ ಆ ವ್ಹಿಲಾಸರ್ಫಳು ಎದೆಯೊಡೆದುಕೊಳ್ಳದೆ ಮೃತ್ಯುಪತ್ರವನ್ನು ಬರೆಯಲು ತನ್ನ

ವರನ್ನು ಅಜ್ಞಾಪಿಸಿದಳು. ಮೃತ್ಯುಪತ್ರವು ತನ್ನ ಕೈಯಲ್ಲಿ ಬಂದ ಬಳಿಕ ಆಕೆಯು ಬಳಿಯಲ್ಲಿದ್ದ ಎಲ್ಲರನ್ನೂ ಕೋಣೆಯ ಹೊರಗೆ ಹೋಗ ಹೇಳಿ ಫೇಸ್ಟೋವನ್ನು ಒಳಗೆ ಕರೆದು ಈ ಮೇರೆಗೆ ಹೇಳಿದಳು—“ ನನ್ನ ಮರಣಕಾಲವು ಸಮೀಪಿಸಿದುದರಿಂದ ಈಗ ನನ್ನ ಮನಸ್ಸು ಅನ್ಯರ ಮನಸ್ಸಿಗಿಂತ ಭಿನ್ನವಾದ ಸ್ಥಿತಿಯನ್ನು ಹೊಂದಿರುವುದು ಸಹಜವಾಗಿದೆ. ಸಾಂಸಾರಿಕ ಕಲ್ಮಷಗಳನ್ನು ಬಿಟ್ಟ ನನ್ನ ಮನಸ್ಸಿನಲ್ಲಿ ತಾವು ಮಾಡಿದ ತಪ್ಪಿಗಾಗಿ ಸ್ವಲ್ಪವೂ ಕೋಪವಿಲ್ಲ. ತಮ್ಮ ತಪ್ಪಿನಿಂದ ನನಗೆ ನಿಜಧಾಮಕ್ಕೆ ತೆರಳುವ ಸುಯೋಗವು ತೀವ್ರ ಒದಗಿದುದಕ್ಕಾಗಿ ತಿರುಗಿ ಸಂತೋಷವನ್ನೇ ಹೊಂದಿರುತ್ತೇನೆ. ಆದರೆ ಜನರು ನಿಮ್ಮ ಈ ತಪ್ಪನ್ನು ಲಕ್ಷಿಸದೆ ಇರಲಾರರು; ಅದರಿಂದ ನಿಮ್ಮ ಆದಾಯವು ಕುಗ್ಗಬಹುದು. ಹಾಗಾದರೆ ನೀವು ಬಡತನದ ತೊಂದರೆಗೊಳಗಾಗಬಹುದು. ಆದುದರಿಂದ ನನ್ನ ಮೃತ್ಯುಪತ್ರದಲ್ಲಿ ಮಾಡಬೇಕಾದ ಯೋಜನೆಯನ್ನು ಮಾಡಿರುವೆನು. ”

ಫ್ಲಿಲಾಸರ್ಫಳು ಮೃತ್ಯುಪತ್ರದಲ್ಲಿ ತನ್ನ ಆಸ್ತಿಯ ಬಹಳ ಭಾಗಕ್ಕೆ ಫೇಸ್ಟೋ ಉತ್ತರಾಧಿಕಾರಿಯೆಂದು ಬರೆಯಿಸಿದ್ದಳು. ಆ ಮಹನೀಯಳ ದೊಡ್ಡ ಮನಸ್ಸು ನಿಜವಾಗಿ ಅವರ್ಣನೀಯವಾದುದು.

---

ಪ್ರಾಮಾಣಿಕತನ.

## ೪೮ ಫ್ರಾನ್ಸದ ಜಾನ್ ಅರಸನು.

ಇಂಗ್ಲಂಡದಲ್ಲಿ ಮೂರನೆಯ ಎಡ್ವರ್ಡ್‌ರಾಜನು ಆಳುತ್ತಿರುವಾಗ (೧೪ನೆಯ ಶತಕದ ಮಧ್ಯ) ಇಂಗ್ಲಂಡಕ್ಕೂ ಫ್ರಾನ್ಸಕ್ಕೂ ಯುದ್ಧವು ನಡೆಯಿತು. ಪಾಇಟಿಅರ್ಸ ಎಂಬಲ್ಲಾದ ಕಾಳಗದಲ್ಲಿ ಎಡ್ವರ್ಡ್ ಬ್ಲ್ಯಾಕ್‌ಪ್ರಿನ್ಸ್ ಎಂಬವನು ಫ್ರಾನ್ಸದ ಅರಸನಾದ ಜಾನ್ ಎಂಬಾತನನ್ನು ಸೋಲಿಸಿದನು. ಮತ್ತು ಆತನನ್ನು ಸೆರೆಹಿಡಿದು ಇಂಗ್ಲಂಡಕ್ಕೊಯ್ದನು. ನಾಲ್ಕು ವರ್ಷಗಳ ತರುವಾಯ ಇಂಗ್ಲಂಡದ ಅರಸನು ತಾನು ಯೋಚಿಸಿದ ಒಪ್ಪಂದದ ನಿಯಮಗಳನ್ನು ಜಾನ್‌ರಾಜನು ತನ್ನ ಪ್ರಜೆಗಳು ಒಪ್ಪುವಂತೆ ಪ್ರಯತ್ನಿಸಿ ಬರಬೇಕೆಂದು ಆತನನ್ನು ಫ್ರಾನ್ಸಕ್ಕೆ ಕಳುಹಿದನು. ಮತ್ತು ಫ್ರಾನ್ಸದ ಪ್ರಜೆಗಳು ಒಪ್ಪಂದದ ನಿಯಮಗಳನ್ನೊಪ್ಪದಿದ್ದರೆ ಮರಳಿ ಇಂಗ್ಲಡಕ್ಕೆ ಬರುವೆನೆಂದು ಜಾನ್ ರಾಜನನ್ನು ವಚನಬದ್ಧನನ್ನಾಗಿ

ಮಾಡಿಕೊಂಡಿದ್ದನು. ಫ್ರಾನ್ಸದ ಪ್ರಜೆಗಳು ಒಪ್ಪಂದದ ನಿಯಮಗಳನ್ನೊಪ್ಪಲಿಲ್ಲ; ಜಾನನ ಹೊರತು ಇನ್ನೊಬ್ಬ ರಾಜನಾಗಿದ್ದರೆ ಈ ಸಮಯದಲ್ಲಿ ಮರಳಿ ಇಂಗ್ಲಂಡಕ್ಕೆ ಹೋಗಿ ಸೆರೆಯಲ್ಲಿರುತ್ತಿರಲಿಲ್ಲ. ಆದರೆ ಜಾನ್ ಅರಸನು ಈ ವಿಚಾರಕ್ಕೆಡೆಗೊಡಲಿಲ್ಲ. ಆತನು ನೆಟ್ಟನೆ ಇಂಗ್ಲಂಡಕ್ಕೆ ಹೊರಟು ಬಂದು ಎಡ್ವರ್ಡ್ ರಾಜನ ವಶವರ್ತಿಯಾಗಿ ಸಾಯುವವರೆಗೆ ಸೆರೆಯಲ್ಲಿದ್ದನು. ಫ್ರಾನ್ಸದಿಂದ ಹೊರಡುವಾಗ ಆ ದೇಶದ ರಾಜತಂತ್ರಕುಶಲರು ವಿರುದ್ಧವಾದ ಆಲೋಚನೆಯನ್ನುಪದೇಶಿಸಿದರೂ ಆತನು ಅದಕ್ಕೆ ಕಿವಿಗೊಡದೆ—ಪ್ರಾಮಾಣಿಕತನವು ಜಗತ್ತಿನಲ್ಲಿ ಯಾವ ಮನುಷ್ಯನಲ್ಲಿರದಿದ್ದರೂ ಅರಸನಲ್ಲಿ ಅವಶ್ಯವಾಗಿ ಇರಲೇಬೇಕು; ಎಂದು ಅವರಿಗೆ ಉತ್ತರವಿತ್ತನು.

---

ದೊಡ್ಡತನ.

## ೪೯ ಅಲ್ಫಾನ್ಸೋ ಅರಸನು.

ಕ್ರಿ. ೧೫ನೆಯ ಶತಕದಲ್ಲಿ ಸಿಸಲಿ ಮತ್ತು ನೇಪಲ್ಸ್ ಎಂಬವುಗಳನ್ನು ಅಲ್ಫಾನ್ಸೋ ಎಂಬ ಪ್ರಖ್ಯಾತನಾದ ರಾಜನು ಆಳುತ್ತಿದ್ದನು. ಆತನು ತನ್ನ ಪ್ರಜೆಗಳನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದುದೇ ಆತನ ಘನತೆಗೆ ಕಾರಣವಾಗಿತ್ತು. ಆತನು ಒಮ್ಮೆ ಸಿಸಲಿ ದ್ವೀಪದಲ್ಲಿ ಯುದ್ಧ ಮಾಡುತ್ತಿದ್ದಾಗ ಸೈನ್ಯದೊಡನೆ ಒಂದು ಹೊಳೆಯನ್ನು ದಾಟ ಆಚೆಗೆ ಹೋಗಬೇಕಾಗಿದ್ದಿತು. ಆದರೆ ಶತ್ರುಗಳು ಅಡ್ಡಿಯ ಮಾಡಿದುದರಿಂದ ಹೊಳೆಯ ದಂಡೆಯ ಮೇಲೆಯೇ ಆ ದಿವಸ ಬೀಡನ್ನು ಬಿಟ್ಟನು. ಆಹಾರ ಸಂಗ್ರಹವು ತೀರಿದುದರಿಂದ ಆ ದಿವಸವೆಲ್ಲ ಸೇನೆಯೂ ಆತನೂ ಉಪವಾಸದಲ್ಲಿರಬೇಕಾಯಿತು. ರಾತ್ರಿಯಾಗಲು ಒಬ್ಬ ದಂಡಾಳು ಕೆಲವು ರೊಟ್ಟಿಗಳನ್ನೂ ಸ್ವಲ್ಪ ಮೊಸರನ್ನೂ ತಂದು ಅರಸನೆದುರಿಗೆ ಇಟ್ಟನು. ಅರಸನು ಆಗ ಆಹಾರವನ್ನು ಕಂಡರೆ ಸಾಕಾಗಿತ್ತು. ಆದರೂ ಆತನು ಆ ದಂಡಾಳಿಗೆ ಕೃತಜ್ಞತೆಯನ್ನು ತೋರ್ಪಡಿಸಿ ಆ ರೊಟ್ಟಿಗಳನ್ನೂ ಮೊಸರನ್ನೂ ತಿರುಗಿ ಒಯ್ಯುಹೇಳಿದನು. ಮತ್ತು ಆ ದಂಡಾಳನ್ನು ಕುರಿತು—ನನ್ನಂತೆಯೇ ನನ್ನ ಸಾವಿರಾರು ಜನ ಸೈನಿಕರು ಹಸಿವಿನಿಂದ ಬಳಲುತ್ತಿರಲು ನಾನೊಬ್ಬನೇ ಆಹಾರ ಮಾಡಲೇ? ಛಿ: ಇದೆಂದಿಗೂ ಆಗದು ಎಂದು ಹೇಳಿದನು.

ಒಂದಾನೊಂದು ದಿವಸ ಈ ಅರಸನು ವೇಷಾಂತರ ಮಾಡಿಕೊಂಡು ತನ್ನ ಪ್ರಜೆಗಳ ಸ್ಥಿತಿಗತಿಗಳನ್ನು ಪ್ರತ್ಯಕ್ಷ ನೋಡಬೇಕೆಂದು ರಾಜ್ಯದಲ್ಲಿ ತಿರುಗಾಡುತ್ತಿದ್ದನು. ಒಂದು ಕಡೆ ಒಬ್ಬ ವ್ಯಾಪಾರಿಯ ಹೇಸರಗತ್ತೆಯು ಕೆಸರಿನಲ್ಲಿ ಸಿಲುಕಿತ್ತು. ಆತನು ದಾರಿಯಲ್ಲಿ ಕಂಡವರನ್ನು ಸಹಾಯಕ್ಕಾಗಿ ಕರೆಯುತ್ತಿದ್ದರೂ ಒಬ್ಬನೂ ಕಣ್ಣೆತ್ತಿ ನೋಡನು. ಆತನು ಆ ದಾರಿಯಲ್ಲಿ ಕುದುರೆಯನ್ನೇರಿ ಹೋಗುತ್ತಿದ್ದ ಅರಸನನ್ನು ಗುರುತಿಸದೆ ಆತನನ್ನು ಸಹಾಯಕ್ಕೆ ಕರೆದನು. ಅರಸನು ಕೂಡಲೆ ಕೆಳಗಿಳಿದು ಬಂದು ಹೇಸರಗತ್ತೆಯನ್ನೆತ್ತುವುದಕ್ಕೆ ಸಹಾಯ ಮಾಡಿದನು !

ಕೆಲವು ಹೊತ್ತಿನ ತರುವಾಯ ಆ ಹೇಸರಗತ್ತೆಯವನು ತನಗೆ ನೆರವಾದವನು ಅರಸನೆಂದು ತಿಳಿಯಲು ಕೂಡಲೆ ಓಲಗಕ್ಕೆ ಹೋಗಿ ಮೊಳಕಾಲೂರಿ ತಲೆವಾಗಿ ತನ್ನ ತಪ್ಪನ್ನು ಕ್ಷಮಿಸಬೇಕೆಂದು ಅರಸನನ್ನು ಬೇಡಿಕೊಂಡನು. ಆಗ ಅರಸನು—ಅಯ್ಯಾ, ನಾನು ಅರಸನಾಗಿರುವಂತೆ ಮನುಷ್ಯನೂ ಆಗಿರುವೆನು; ಸಂಕಟದಲ್ಲಿ ಸಿಲುಕಿದವರನ್ನು ಉದ್ಧರಿಸುವುದು ಅರಸನಾದ ನನ್ನ ಕರ್ತವ್ಯವಾಗಿರುವಂತೆ ಅವರಿಗೆ ನೆರವಾಗುವುದೂ ಮನುಷ್ಯನಾದ ನನ್ನ ಕರ್ತವ್ಯವಾಗಿರುವುದು. ಹೀಗಿರುವಾಗ ನಿನ್ನ ತಪ್ಪೇನೂ ಇರುವುದಿಲ್ಲವೆಂದೂ, ನಾನು ಕ್ಷಮಿಸಬೇಕಾದುದೇ ಇಲ್ಲವೆಂದೂ ನುಡಿದನು.

ಈ ಅರಸನು ತನ್ನ ರಾಜ್ಯದಲ್ಲಿ ಬೇಕಾದಾಗ ಬೇಕಾದಲ್ಲಿ ಅಂಗರಕ್ಷಕರು ಮೊದಲಾದ ಯಾವ ಪರಿವಾರವೂ ಇಲ್ಲದೆ ಒಬ್ಬನೇ ಸಂಚರಿಸುತ್ತಿದ್ದನು. ಇದನ್ನು ಕಂಡು ಒಬ್ಬ ಮಂತ್ರಿಯು ತಾವು ಹೀಗೆ ಮಾಡುವುದು ಸರಿಯಲ್ಲವೆಂದು ಸೂಚಿಸಿದನು. ಆಗ ಅರಸನು—ಇದರಲ್ಲಿ ಅಂಜಿಕೆ ಹಿಡಿಯುವುದೇಕೆ? ತಂದೆಯು ತನ್ನ ಮಕ್ಕಳಿಗೆ ಅಂಜುವುದುಂಟೇ ಎಂದು ಕೇಳಿದನು.

ಪ್ರಜೆಗಳನ್ನು ಮಕ್ಕಳಂತೆ ಸಲಹುವ ರಾಜನನ್ನು ಅವರು ತಮ್ಮ ಪ್ರಾಣವನ್ನರ್ಪಿಸಿಯಾದರೂ ಕಾಪಾಡುವರಲ್ಲದೆ ಆತನಿಗೆ ದ್ರೋಹವನ್ನೆಂದಿಗೂ ಮಾಡರು.

---

ಆತ್ಮವಿಯ ಹೂವಿನಲ್ಲಿ
ಸುವಾಸನೆ.

## ೫೦ ಹಬಸಿ ಹೆಂಗುಸು.

ಸೆಂಟ್‌ಡೋಮಿಂಗೋ ಎಂಬ ದ್ವೀಪದಲ್ಲಿ ಒಮ್ಮೆ ಭೂಕಂಪವು ಬಹಳ ಕೇಡನ್ನುಂಟುಮಾಡಿತು. ಆ ದ್ವೀಪದಲ್ಲಿ ಒಬ್ಬ ಗೃಹಸ್ಥನ ಮನೆಯಲ್ಲಿ ಒಬ್ಬ ಹಬಸಿಜಾತಿಯ ಹೆಂಗುಸು ತೊತ್ತಾಗಿದ್ದಳು. ಆಕೆಯು ಆ ದಿನ ಒಡೆಯನ ಕೂಸನ್ನು ಆಡಿಸುತ್ತ ಕುಳಿತಿರುವಾಗ ಭೂಕಂಪದಿಂದ ಒಮ್ಮೆಲಿ ಮನೆಗಳು ಬೀಳ ತೊಡಗಿದುವು. ಜನರೆಲ್ಲ ಇದ್ದ ಹಾಗೆಯೆ ಮನೆಯು ಬಿಟ್ಟು ಹೊರಗೆ ಬೀದಿಗೆ ಬಂದರು. ಈ ತೊತ್ತು ತನ್ನ ವಶಕ್ಕೆ ಕೊಟ್ಟ ಒಡೆಯನ ಕೂಸನ್ನು ಅಲ್ಲಿಯೇ ಬಿಟ್ಟು ಹೋಗಲಾರದೆ ಕೂಸನ್ನೆತ್ತಿಕೊಂಡು ಹೊರಡುವಷ್ಟರಲ್ಲಿ ಮನೆಯ ಮುಂದಿನ ಬಾಗಿಲ ಕಡೆಯ ಭಾಗವು ಬಿದ್ದುದರಿಂದ ಆಕೆಯ ದಾರಿಯು ಕಟ್ಟಾ ಯಿತು. ಮನೆಯ ಮೇಲ್ಛಿಲೆಗಳು ಬೀಳುತ್ತಿದ್ದುದರಿಂದ ತೊಲೆ ಕಂಬ ಕಲ್ಲು ಮಣ್ಣು ಮುಂತಾದುವು ಮೈ ಮೇಲೆ ಬೀಳತೊಡಗಿದುವು. ಆಗ ಆ ತೊತ್ತು ತನ್ನ ಜೀವಕ್ಕಿಂತ ತನ್ನ ಒಡೆಯನ ಕೂಸಿನ ಜೀವವು ಹೆಚ್ಚಿನದೆಂದು ಬಗೆದು, ತನ್ನ ದೇಹವನ್ನು ಬಿಲ್ಲಿನಂತೆ ಮಣಿಸಿ ಕೆಳಗಡೆಯಲ್ಲಿ ಆ ಕೂಸನ್ನಿರಿಸಿಕೊಂಡಳು. ಭೂಕಂಪದ ವೇಗವು ತಗ್ಗಿದ ಬಳಿಕ ಜನರು ಬಂದು ನೋಡಲು ಮೈ ಮೇಲೆ ತೊಲೆಕಲ್ಲು ಮೊದಲಾದುವು ಬಿದ್ದ ಆ ತೊತ್ತು ಕೂಡಲೆ ಸತ್ತು ಹೋದಳು. ಆದರೆ ಆಕೆಯ ಮೈಯ ಬುಡದಲ್ಲಿ ಕೂಸು ಸುರಕ್ಷಿತವಾಗಿ ಇದ್ದಿತು.

ಅಫ್ರಿಕದೊಳಗಿನ ಕರಿಯ ಜನರು ಕೇವಲ ಪಶುಸಮಾನರೆಂದೂ, ಅವ ರಲ್ಲಿ ದಯೆ ಕೃತಜ್ಞತೆ ಮೊದಲಾದ ಸುಗುಣಗಳ ಗಂಧವೂ ಕೂಡ ಇರುವುದಿಲ್ಲ ವೆಂದೂ ಹೇಳುವರು. ಆದರೆ ನಾಗರಿಕರೆನಿಸಿದ ಯುರೋಪಿಯನರು ನೂರು ವರ್ಷಗಳ ಪೂರ್ವದಲ್ಲಿ, ಈ ಜನರನ್ನು ಹಿಡಿದೊಯ್ದು, ಕಂಡಲ್ಲಿ ಮಾರಿಬಿಡುತ್ತಿ ದ್ದರು. ಅವರನ್ನು ಕೊಂಡುಕೊಂಡ ನಾಗರಿಕರು ಅವರನ್ನು ಪಶುಗಳಂತೆ ನಡೆ ಯಿಸಿಕೊಳ್ಳುತ್ತಿದ್ದರು. ಆದರೆ ಪರಮೇಶ್ವರನು ಇಂತಹ ಕಾಡಾಡಿಗರಲ್ಲಿಯೂ ಹೃದಯವನ್ನುಕ್ಕಿಸಿ ಬಿಡುವಂತಹ ಸುಗುಣಗಳನಿಟ್ಟುದನ್ನು ನೋಡಿದರೆ ಆತನ ಆಗಾಧ ಸೃಷ್ಟಿಗೆ ಬೆರಗುಬಡಬೇಕಾಗುವುದು. ಮತ್ತು ಸದ್ಗುಣಗಳ ವಿಕಾಸವಿಲ್ಲದ ಬಿಳಿಯಛಾಯದ ನಾಗರಿಕತೆಗೆ ಅಭಿಮಾನಪಡುವವರು ನಾಚಬೇಕಾಗುವುದು.

ನಿರಹಂಕಾರ

## ೫೧ ಸುಲೇಮಾನ್ ಫಾರ್ಶಿ.

ಒಂದಾನೊಂದು ದಿನ ಮಹಾತ್ಮನಾದ ಸುಲೇಮಾನ್ ಫಾರ್ಶಿಯು ಜಯ ಶೀಲವಾದ ತನ್ನ ದಂಡಿನ ಪಾಳಯದಿಂದ ಸ್ವಲ್ಪ ದೂರದಲ್ಲಿ ಸಾಮಾನ್ಯವೇಷ ದಿಂದ ತಿರುಗಾಡುತ್ತ ಹೊರಟಿದ್ದನು. ಆ ದಾರಿಯಲ್ಲಿಯೇ ದಂಡಿಗೆ ಹುಲ್ಲನ್ನು ಒದಗಿಸುವ ಒಬ್ಬ ವ್ಯಾಪಾರಿಯು ಕತ್ತೆಗಳ ಮೇಲೆ ಹುಲ್ಲಿನ ಹೊರೆಗಳನ್ನು ಹೇರಿ ಕೊಂಡು ತನ್ನ ತಲೆಯ ಮೇಲೂ ಒಂದು ಹೊರೆಯನ್ನಿಟ್ಟುಕೊಂಡು ಬರುತ್ತಿ ದ್ದನು. ಆತನು ಇದಿರಿಗೆ ಸಾಮಾನ್ಯವೇಷದ ಅರಸನನ್ನು ಕಂಡು ಇವನೊಬ್ಬ ಬಡವನಿರಬಹುದೆಂದು ಬಗೆದು ತನ್ನ ತಲೆಯ ಮೇಲಿನ ಹೊರೆಯನ್ನು ಆತನ ತಲೆಯ ಮೇಲೆ ಹೊರಿಸಿ ಪಾಳಯದ ಕಡೆಗೆ ಹೊರಡಿಸಿಕೊಂಡು ನಡೆದನು. ಚಕ್ರವರ್ತಿಯು ಹುಲ್ಲಿನ ಹೊರೆಯನ್ನು ಹೊತ್ತುಕೊಂಡು ಆ ವ್ಯಾಪಾರಿಯ ಸಂಗಡ ನಡೆದನು. ಪಾಳಯದ ಬಳಿಗೆ ಬಂದ ಬಳಿಕ ಸೈನಿಕರು ಈ ನೋಟ ವನ್ನು ಕಂಡು ಆಶ್ಚರ್ಯಚಕಿತರಾಗಿನಿಂತರು. ಅದನ್ನು ಕಂಡು ಆ ವ್ಯಾಪಾರಿಯು ತನ್ನ ಅವಿವೇಕಕ್ಕೆ ನೊಂದುಕೊಂಡನು. ಅವನು ಮುಂಗಾಣದೆ ದಿಕ್ಕು ತೋರದೆ ನಿಂತನು. ಆತನ ಕಣ್ಣಿಗೆ ಕತ್ತಲೆ ಕವಿಯಿತು. ಆತನು ಅರಸನ ಪಾದ ಗಳ ಮೇಲೆ ದೊಪ್ಪನೆ ಬಿದ್ದುಬಿಟ್ಟನು. ಆಗ ಸುಲೇಮಾನ್ ಫಾರ್ಶಿಯು ನಿರ್ವಿಣ್ಣ ನಾದ ಆ ವ್ಯಾಪಾರಿಯನ್ನು ಕುರಿತು—ಅಯ್ಯಾ, ಅಂಜಬೇಡ; ಮೂರು ಪ್ರಯೋ ಜನಗಳಿಗಾಗಿ ಈ ಕೆಲಸವನ್ನು ನಾನೇ ಮಾಡಿರುವೆನು. ಆ ಪ್ರಯೋಜನಗಳಾ ವುವೆಂದರೆ—(೧) ಗರ್ವತ್ಯಾಗ, (೨) ನಿರರ್ಥಕವಾದ ಜನಲಜ್ಜೆಯನ್ನು ಹಿಡಿಯ ದಿರುವುದು, (೩) ನನ್ನ ಪ್ರಜೆಗಳ ಸುಖದುಃಖಗಳನ್ನು ನಾನೇ ಕಣ್ಣಿಟ್ಟು ನೋಡುವುದು. ಈ ಕಾರಣಗಳಿಂದಲೇ ನಿನ್ನ ತಲೆಯ ಮೇಲಿನ ಹೊರೆಯನ್ನು ಹೊತ್ತುಕೊಂಡು ನನ್ನ ಪಾಳಯದ ವರೆಗೆ ಬಂದೆನು. ಆದರೆ ನೀನು ಇನ್ನು— ಯಾರನ್ನೂ ಬಿಟ್ಟಿಯ ಹಿಡಿಯಬೇಡ; ನಿನ್ನ ದುಡಿತದಿಂದ ನಿನ್ನ ಹೊಟ್ಟೆಯ ಹೊರೆದುಕೊಳ್ಳು ಎಂದು ಉಪದೇಶಿಸಿ ಆ ವ್ಯಾಪಾರಿಯನ್ನು ಕಳುಹಿದನು.

---

ಲೋಭದ ಪ್ರಾಬಲ್ಯ.

## ೫೨ ಫ್ರಾಂಕ್ಲಿನನ ನಿದರ್ಶನ

ಅಮೇರಿಕದ ಶಾಸ್ತ್ರಜ್ಞನೂ, ವಿದ್ಯುತ್ತಿನ ಆವಿಷ್ಕರ್ತನೂ ಆದ ಬೆಂಜಾಮಿನ್ ಫ್ರಾಂಕ್ಲಿನನನ್ನು ಕುರಿತು ಒಬ್ಬ ಗೃಹಸ್ಥನು—'ವಿಪುಲವಾದ ಐಶ್ವರ್ಯವುಳ್ಳವರೂ ಕೂಡ ಇನ್ನೂ ಹಣವು ಬೇಕೆಂದು ಹಂಬಲಿಸುವುದೇಕೆ' ಎಂದು ಕೇಳಿದನು. ಫ್ರಾಂಕ್ಲಿನನು ಈ ಪ್ರಶ್ನದ ಉತ್ತರವನ್ನು ಬಾಯಿಂದ ಹೇಳದೆ ಒಂದು ಉಪಾಯದಿಂದ ತಿಳುಹಿದನು. ಅದು ಹೇಗೆಂದರೆ, ಆತನು ಒಬ್ಬ ಚಿಕ್ಕ ಹುಡುಗನನ್ನು ಕರೆದು ಆತನ ಎರಡೂ ಕೈಗಳಲ್ಲಿ ಎರಡು ದೊಡ್ಡ ಹಣ್ಣುಗಳನ್ನು ಕೊಟ್ಟನು. ಹುಡುಗನು ಹರ್ಷಬಟ್ಟು ಆ ಹಣ್ಣುಗಳನ್ನು ಕೈಯಲ್ಲಿ ಹಿಡಿದುಕೊಂಡನು. ಬಳಿಕ ಮತ್ತೊಂದು ಬಹಳ ದೊಡ್ಡ ಹಣ್ಣನ್ನು ತಂದು ಹುಡುಗನಿಗೆ ಕೊಡಹೋದನು. ಆ ಹುಡುಗನು ಆ ಹಣ್ಣನ್ನೂ ಅವಚಿಕೊಳ್ಳುವುದಕ್ಕೆ ಹವಣಿಸತೊಡಗಿದನು. ಆದರೆ ಆ ಮೂರನೆಯ ಹಣ್ಣನ್ನು ಎತ್ತಿಕೊಳ್ಳುವ ಸಂಭ್ರಮದಲ್ಲಿ ಮೂರೂ ಹಣ್ಣುಗಳೂ ನೆಲದ ಮೇಲೆ ಬಿದ್ದು ಹೋದುದರಿಂದ ಆ ಬಾಲಕನು ಅಳತೊಡಗಿದನು. ಆಗ ಫ್ರಾಂಕ್ಲಿನನು ಆ ಗೃಹಸ್ಥನನ್ನು ಕುರಿತು—ಅಯ್ಯಾ ನೋಡಿರಿ, ಮನುಷ್ಯನ ಸಹಜಾತವಾದ ಲೋಭವು ಎಷ್ಟು ಪ್ರಬಲವಾಗಿದೆ! ಇದರಿಂದಲೇ ಬೇಕಾದಷ್ಟು ಭೋಗ್ಯ ವಸ್ತುಗಳು ದೊರೆತಿದ್ದರೂ ಯಾವನೂ ತೃಪ್ತನಾಗುವುದಿಲ್ಲ ಎಂದು ಹೇಳಿದನು.

---

ಲೋಕಹಿತ ಬುದ್ಧಿ.

## ೫೩ ಕೋಲಂಬಸ.

ಸುಪ್ರಸಿದ್ಧನಾವಿಕನಾದ ಕೋಲಂಬಸನು ಅಮೇರಿಕಾಖಂಡವನ್ನು ಕಂಡುಹಿಡಿದು ಮರಳಿ ಸ್ಪೇನಕ್ಕೆ ಬರುವಾಗ ಪೋರ್ತುಗಾಲದ ಹತ್ತಿರ ಸಮುದ್ರದಲ್ಲಿ ಭಯಂಕರವಾದ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದನು. ಅದರ ತೀಟಕ್ಕೆ ಹೊಯ್ದಾಡುತ್ತಿದ್ದ ಕೋಲಂಬಸನ ಸಣ್ಣಹಡಗು ಇನ್ನು ನಿಲ್ಲುವುದು ಅಶಕ್ಯವಾಯಿತು. ಆಗ ಕೋಲಂಬಸನು, ತಾನು ಅಮೇರಿಕವನ್ನು ಕಂಡು ಹಿಡಿದ ವರ್ತಮಾನವನ್ನು ಹಲವು ಸಣ್ಣ ಕಾಗದಗಳ ಮೇಲೆ ಬರೆದು ಆ ಕಾಗದಗಳನ್ನು ಬಾಟಲಿಗಳಲ್ಲಿ ಹಾಕಿ ಅವುಗಳಿಗೆ ಬೆಣೆಗಳನ್ನು ಹಾಕಿ ಸೀಲುಮಾಡಲಾರಂಭಿಸಿದನು. ಇದನ್ನು ಕಂಡು ಉಳಿದ ನಾವಿಕರು ಇದೇನೆಂದು ಕೇಳಲು ಆತನು—

ಬಂಧುಗಳೇ, ನಮ್ಮ ಹಡಗು ಮುಳುಗಿದರೆ, ನಾವು ಯಾರೂ ದೇಶಕ್ಕೆ ಮರಳಿ ಹೋಗದಿದ್ದರೂ ದೇವರ ದಯೆಯಿಂದ ಸಮುದ್ರದ ತೆರೆಗಳು ಈ ಬಾಟಲಿಗಳಲ್ಲಿ ಒಂದನ್ನಾದರೂ ಯಾವದೊಂದು ದೇಶದ ದಂಡೆಗೆ ಮುಟ್ಟಿಸಬಹುದು; ಆಗ ನಾವು ಹೊಸ ದೇಶವನ್ನು ಕಂಡು ಹಿಡಿದ ಸುದ್ದಿಯು ಹರಡುವುದು. ಅದರಿಂದ ಮಾನವಜಾತಿಯು ಕಲ್ಯಾಣವಾಗುವುದು; ಆಗ ನಮ್ಮ ಶ್ರಮವು ಸಾರ್ಥಕವಾಗುವುದು." ಎಂದು ಹೇಳಿದನು.

ಇಷ್ಟರಲ್ಲಿ ಬಿರುಗಾಳಿಯು ಸ್ವಲ್ಪ ಸ್ವಲ್ಪ ಕುಗ್ಗತೊಡಗಿತು. ಅದರಿಂದ ಕೊಲಂಬಸನ ಹಡಗು ತೊಂದರೆಯಿಲ್ಲದೆ ದಂಡೆಯನ್ನೈದಿತು.

---

ಜನಾಂಗದ ಸ್ವಾರ್ಥತ್ಯಾಗ.

## ೫೪ ಮಾಸ್ಕೋವಿನಾಶ.

ನೆಪೋಲಿಯನ್ ಬೋನಾಪಾರ್ಟನು (೧೮೧೨ ರಲ್ಲಿ) ಆರಿಸಿ ಆರಿಸಿ ಸಿದ್ಧಪಡಿಸಿದ ೪ ಲಕ್ಷ ಫ್ರೆಂಚಸೈನಿಕರ ಸೈನ್ಯದೊಡನೆ ರಶಿಯವನ್ನು ಆಕ್ರಮಿಸಿದನು; ಮತ್ತು ರಶಿಯದವರೊಡನೆ ನಡೆದ ಯುದ್ಧದಲ್ಲಿ ಅವರನ್ನು ಸೋಲಿಸಿ ಆ ದೇಶದ ಪ್ರಾಚೀನ ರಾಜಧಾನಿಯಾದ ಮಾಸ್ಕೋ ಪಟ್ಟಣವನ್ನು ಮುತ್ತಿದನು. ಆಗ ಸ್ವದೇಶಭಕ್ತರಾದ ಆ ಪಟ್ಟಣದ ಜನರು ಅಪಾರ ಸಂಪತ್ತಿಯಿಂದ ತುಂಬಿದ ಆ ಸುಂದರ ಪಟ್ಟಣವನ್ನು ಸುಟ್ಟು ಬೂದಿಯ ಮಾಡಿದರು. ಅಲ್ಲಿಯ ಭಯಂಕರವಾದ ಚಳಿಯಲ್ಲಿ ಫ್ರೆಂಚಸೈನಿಕರಿಗೆ ಆಶ್ರಯವಿಲ್ಲದಂತೆ ಮಾಡುವ ಉದ್ದೇಶ್ಯದಿಂದಲೇ ಅನೇಕ ಶತಮಾನಗಳಿಂದ ಸಂಗ್ರಹಿಸಲ್ಪಟ್ಟ ಉತ್ಕೃಷ್ಟ ಚಿತ್ರಗಳು, ಮೂರ್ತಿಗಳು, ಪುಸ್ತಕಗಳು ಮೊದಲಾದ ಅಮೌಲ್ಯ ಪದಾರ್ಥಗಳಿಂದ ತುಂಬಿದ ತಮ್ಮ ಸರ್ದಾರರ ಅರಮನೆಗಳನ್ನು ಸುಡುವುದಕ್ಕೆ ಆ ರಶಿಯನರು ಹಿಂದೆಮುಂದೆ ನೋಡಲಿಲ್ಲ. ಫ್ರೆಂಚಸೈನ್ಯವು ಹೋದಹೋದಲ್ಲೆಲ್ಲ ಇದೇಮೇರೆಗೆ ರಶಿಯನರು ತಮ್ಮ ಊರುಗಳಿಗೆ ತಾವೇ ಬೆಂಕೆಯನ್ನು ಹತ್ತಿಸಿ ಸುಟ್ಟುಬಿಟ್ಟರು. ದೇಶದ ಹಿತಕ್ಕಾಗಿ ತಮ್ಮ ದೇಶವನ್ನು ತಾವೇ ಸುಟ್ಟುಕೊಂಡ ಇಂತಹ ಉಜ್ವಲ—ಉದಾಹರಣಗಳು ಇತಿಹಾಸದಲ್ಲಿ ಸಿಕ್ಕಲಾರವು. ರಶಿಯದ ಒಕ್ಕಲಿಗರು ಕೂಡ ಫ್ರೆಂಚಸೈನ್ಯವನ್ನು ಕಂಡೊಡನೆ ತಮ್ಮ ಧಾನ್ಯಾಗಾರಗಳನ್ನೂ, ಮೇವಿನ ಬಣವೆಗಳನ್ನೂ ಸುಟ್ಟೇಬಿಡುವರು. ಹಾಗೆ ಸುಡುವಾಗ ಫ್ರೆಂಚ್‌ಸೈನಿಕರು ಗುಂಡುಗಳನ್ನು ಹಾರಿಸಿದರೂ ರಶಿಯನರು ಲೆಕ್ಕಿಸದೆ ಪ್ರಾಣವನ್ನು ಬಿಟ್ಟರಲ್ಲದೆ ಸುಡುವ

ದನ್ನು ಬಿಡಲಿಲ್ಲ. ಹೋದಹೋದಲ್ಲಿ ಹೀಗಾದುದರಿಂದ ಫ್ರೆಂಚ್‍ಸೈನಿಕರಿಗೆ ರಶಿಯದಲ್ಲಿ ಹೊಟ್ಟೆಗೆ ಆಹಾರವು ದೊರೆಯಲಿಲ್ಲ; ಮಲಗಲು ಅಸರವು ದೊರೆಯಲಿಲ್ಲ. ಅವರಿಗೆ ದೊರೆತುದೇನೆಂದರೆ, ಉತ್ತರಧ್ರುವದ ಕಡೆಯಿಂದ ಬರುವ ಭಯಂಕರ ಶೀತಲವಾಯುವಿನ ಬಾಧೆ, ಹಿಮದ ಮಳೆ, ದೂರದಲ್ಲಿದ್ದು ತಮ್ಮನ್ನು ಬಳಲಿಸುತ್ತಿದ್ದ ರಶಿಯನ್ ಸೈನ್ಯದ ದರ್ಶನ. ನೇಪೋಲಿಯನನು ೨೫ ಸಾವಿರ ಸೈನಿಕರೊಡನೆ ರಶಿಯದಿಂದ ಪಾರಾಗಿ ಬರುವಲ್ಲಿ ಆತನ ಪುಣ್ಯವೆಲ್ಲ ವೆಚ್ಚವಾಯಿತು. ಯುದ್ಧವಿಲ್ಲದೆ ನೆಪೋಲಿಯನನ ಮೂರೂ ಮುಕ್ಕಾಲು ಲಕ್ಷ ವೀರ ಸೈನಿಕರು ಸಾವಿಗೀಡಾದರು.

ಯುದ್ಧವು ಮುಗಿದ ಬಳಿಕ ರಶಿಯದ ಸಮ್ರಾಜನಾದ ಅಲೆಕ್‍ಜಂಡರನು ತನ್ನ ದೇಶದ ಗ್ರಾಮವಾಸಿಗಳು, ನಾಗರಿಕರು, ಸೈನಿಕರು ಇವರಿಗೆ ಅವರ ಅಸಾಧಾರಣ ಸ್ವಾರ್ಥತ್ಯಾಗದ ಮನ್ನಣೆಗೆಂದು ಬಿರುದಿನ ಬಿಲ್ಲೆ ( ಮೆಡಲು ) ಗಳನ್ನು ಕೊಟ್ಟನು. ಪರಮೇಶ್ವರನ ಕೃಪೆಯಿಂದಲೇ ಜನರಲ್ಲಿ ದೇಶರಕ್ಷಣೆಗಾಗಿ ನಿಃಸ್ವಾರ್ಥವಾದ ಉತ್ಸಾಹವುಂಟಾಯಿತೆಂಬುದನ್ನು ತೋರ್ಪಡಿಸುವುದಕ್ಕಾಗಿ ಆ ಮೆಡಲುಗಳ ಮೇಲೆ—“ ನನ್ನಿಂದ ಇಲ್ಲವೆ ನಮ್ಮಿಂದ ಆಗಲಿಲ್ಲ; ಇದು ನಿನ್ನ ದಯೆ ” ಎಂಬ ಮಾತುಗಳು ಬರೆಯಲ್ಪಟ್ಟಿದ್ದುವು.

---

ದೃಢವಿಶ್ವಾಸ.

## ೫೫ ಒಬ್ಬ ಇಂಗ್ಲಿಶ್ ಬಾಲಕ.

ಲಿವ್ವರ್‍ಪೂಲ್ ನಗರದಲ್ಲಿ ಒಮ್ಮೆ ಅತ್ಯಂತ ಅನಾವೃಷ್ಟಿಯಾಗಲು ನಾಗರಿಕರು ದೇವರನ್ನು ಕುರಿತು ಪ್ರಾರ್ಥನೆ ಮಾಡುವುದಕ್ಕಾಗಿ ಒಂದು ದಿವಸ ಒಂದು ಸ್ಥಳದಲ್ಲಿ ನೆರೆಯಬೇಕೆಂದು ಗೊತ್ತುಮಾಡಿದರು, ಒಬ್ಬ ಬಾಲಕನು ಕೈಯಲ್ಲಿ ಕೊಡೆಯನ್ನು ಹಿಡಿದುಕೊಂಡು ಆ ಸ್ಥಳಕ್ಕೆ ಬರುತ್ತಿರುವುದನ್ನು ಕಂಡು ಎಲ್ಲರೂ ನಕ್ಕು—ತಮ್ಮಾ ಒಂದು ಹನಿ ನೀರು ಬೀಳದಿರುವುದಕ್ಕಾಗಿ ನಾವೆಲ್ಲರೂ ಗೋಳಾಡುತ್ತಿದ್ದೇವೆ; ನಿನಗೊಬ್ಬನಿಗೆ ಮಳೆಯ ಅಂಜಿಕೆ ಎಲ್ಲಿಂದ ಬಂದಿತು; ಕೊಡೆಯನ್ನು ತಂದಿರುವೆ ಎಂದು ಕೇಳಿದರು. ಅಗಲಾ ಬಾಲಕನು ಗಂಭೀರಭಾವದಿಂದ—ಈ ದಿನ ಕರುಣಾಮಯನಾದ ಪರಮೇಶ್ವರನ ಬಳಿಯಲ್ಲಿ ಎಲ್ಲರೂ ಅಂತಃಕರಣಪೂರ್ವಕವಾಗಿ ಮಳೆಯನ್ನು ಬೇಡಿಕೊಳ್ಳಬೇಕೆಂದು ಇಲ್ಲಿ ನೆರೆದಿ

ರುವೆವೆಂದು ಕೇಳಿದ್ದೆನು. ಆದುದರಿಂದ ನಾನು ಕೊಡೆಯನ್ನು ತಂದೆನು; ಆದರೆ ನೀವಾರೂ ಕೊಡೆಯನ್ನು ತಂದಿಲ್ಲ; ಎಂದಬಳಿಕ ನೀವು ಈ ಬಗೆಯ ನಮ್ಮ ಪ್ರಾರ್ಥನೆಯಿಂದ ಏನೂ ಫಲವಾಗುವುದಿಲ್ಲವೆಂಬುದನ್ನು ಮನಸ್ಸಿನೊಳಗೆ ನಿಶ್ಚಯಿಸಿಕೊಂಡೇ ಬಂದಿರುವಂತೆ ತೋರುತ್ತಿದೆ ಎಂದನು. ಹಿರಿಯರು ನಾಚಿದರು.

---

ಕ್ರೋಧಸಂಯಮ.

## ೫೬ ಮಹಾತ್ಮನಾದ ಹುಸೇನ.

ಮಹಾತ್ಮನಾದ ಹುಸೇನನು ಮಹಮ್ಮದ ಪಯಗಂಬರರ ಪ್ರಿಯಶಿಷ್ಯನೂ ಅಳಿಯನೂ ಆದ ಹಜರತ ಅಲಿಯ ಮಗನು. ಈತನು ತಪ್ಪುಗಳನ್ನು ಕಂಡೊಡನೆ ಉರಿದೇಳುವನು. ಆದರೆ ಈತನ ಸಿಟ್ಟು ರವದಿಯ ಉರಿಯ ಹಾಗೆ ಭಗ್ಗನೆ ಎದ್ದು ಕೂಡಲೆ ತಣ್ಣಗಾಗುವುದು; ಪಠಾಣರ ಸಿಟ್ಟಿನಂತೆ ರಕ್ತಮಾಂಸಗಳಲ್ಲಿ ಛೇದಿಸಿ ನಿಲ್ಲುವಂತಹುದಲ್ಲ.

ಒಂದಾನೊಂದು ದಿನ ಅರಮನೆಯಲ್ಲಿ ಒಬ್ಬ ದಾಸನು (ಗುಲಾಮ) ಬಿಸಿ ನೀರನ್ನು ತರುತ್ತಿದ್ದನು. ಆದರೆ ಆತನ ಎಚ್ಚರಗೇಡಿತನದಿಂದ ಕೈಯೊಳಗಿನ ಪಾತ್ರೆಯು ಕೆಳಗೆ ಬೀಳಲು ಅದರೊಳಗಿನ ಎಸರಿನಂತಹ ನೀರು ಹುಸೇನನ ಕಾಲಮೇಲೆ ಬಿದ್ದಿತು. ಆಗ ಹುಸೇನನು ಗಟ್ಟಿಯಾಗಿ ಕೀರಿದನು. ಆ ದನಿಯಿಂದ ಹುಸೇನನ ಕಾಲು ಬೆಂದಿರಬೇಕೆಂದೂ ಆತನು ಬಹಳ ಸಿಟ್ಟಾಗಿರುವನೆಂದೂ ನಿಶ್ಚಯವಾದುದರಿಂದ ದಾಸನು ಕೈಕಾಲುಗೆಟ್ಟನು. ಆದರೂ ಆ ದಾಸನು ಆಗ— "ಕ್ರೋಧಸಂಯಮ ಮಾಡುವವರು ಸ್ವರ್ಗವನ್ನೈದುವರು" ಎಂಬ ಅರ್ಥದ ಕುರಾನದ ವಾಕ್ಯವನ್ನು ನುಡಿದನು. ಹುಸೇನನ ಕೋಪವು ಈ ಮೊದಲೇ ಅಡಗಿ ಹೋಗಿತ್ತು. ಆಗ ಹುಸೇನನು—ನನ್ನ ಸಿಟ್ಟು ಈಗ ಹೋಗಿದೆ ಎಂದು ನುಡಿದನು. ದಾಸನು ಮತ್ತೆ ಅದೇ ಕುರಾನವಾಕ್ಯದ—"ಕ್ಷಮಾಶೀಲರೂ ಸ್ವರ್ಗವನ್ನೈದುವರು" ಎಂಬರ್ಥದ ಭಾಗವನ್ನು ನುಡಿದನು. ಆಗ ಹುಸೇನನು— ನಾನು ನಿನ್ನನ್ನು ಕ್ಷಮಿಸಿರುವೆನು ಎಂದನು. ದಾಸನು ಮತ್ತೆ—"ಪರಮೇಶ್ವರನು ಪರೋಪಕಾರಿಗಳನ್ನು ಪ್ರೀತಿಸುವನು" ಎಂಬ ಅರ್ಥದ ಆ ನುಡಿಯ ಕೊನೆಯ ಭಾಗವನ್ನು ಹೇಳಿದನು. ಮಹಾತ್ಮನಾದ ಹುಸೇನನು ಮೊದಲೇ ಬಹು ಮೃದು ಸ್ವಭಾವದವನು. ದಾಸನು ಹೇಳಿದ ಕುರಾನದ ನುಡಿಯನ್ನು ಕೇಳಿದ ಬಳಿ

ಕಂತೂ ಆತನು ತನಗಾದ ನೋವನ್ನು ಮರೆತು ದಾಸನನ್ನು ತನ್ನ ಹಿತಬಂಧು ವನ್ನಾಗಿ ತಿಳಿದನು; ಮತ್ತು ಆತನನ್ನು ಕುರಿತು—ನೀನು ಇಂದಿನಿಂದ ದಾಸನಲ್ಲ ಎಂದು ಹೇಳಿ ಆತನನ್ನು ಮನ್ನಿಸಿದನು.

---

ಸಂಚಯಮಕ್ಕೆ ಸಹಾಯ

## ೫೭ ತೊಂಬತ್ತೊಂಬತ್ತರ ಮಹಿಮೆ.

ಮಿತವ್ಯಯ ಶೀಲನಾದ ಒಬ್ಬ ಬ್ರಾಹ್ಮಣನ ಮನೆಯ ನೆರೆಯಲ್ಲಿ ಒಬ್ಬ ಬಡಗಿಯು ಇದ್ದನು. ಬಡಗಿಗೆ ದಿನದಿನ ಹೊಸದುಡ್ಡು; ಬಂದುದನ್ನೆಲ್ಲ ಹೊಟೆ ಬಟ್ಟೆಗಳಿಗೂ, ಸುಖವಿಲಾಸಗಳಿಗೂ ವೆಚ್ಚಮಾಡಿಬಿಡುವನು; ಸ್ವಲ್ಪವನ್ನೂ ಸಂಗ್ರ ಹಿಸುತ್ತಿರಲಿಲ್ಲ. ಒಮ್ಮೊಮ್ಮೆ ಮುಂಗಡ ಮಜೂರಿಯು ಬಂದಾಗ ಆ ಧನವಂತ ನಾದ ಬ್ರಾಹ್ಮಣನ ಮನೆಗಿಂತ ಹೆಚ್ಚಿಗೆ ಈ ಬಡಗಿಯ ಮನೆಯಲ್ಲಿ ಊಟ ಉಡಿ ಗೆಗಳ ಸಡಗರವು ನಡೆಯುವುದು. ಮುಂದೆ ಕೆಲವು ದಿನಗಳವರೆಗೆ ಹೊಟ್ಟೆಗೆ ತೊಂದರೆಯಾಗುವುದನ್ನೂ ಆತನು ಲೆಕ್ಕಿಸುತ್ತಿರಲಿಲ್ಲ. ಬಾಹ್ಮಣನ ಹೆಂಡತಿಯು ಈ ಬಡಗಿಯ ಹಾಳುಬಾಳುವೆಯನ್ನು ಕಂಡು ಗಂಡನ ಬಳಿಯಲ್ಲಿ ಈ ಬಡಿಗಿಗೆ ಮಕ್ಕಳು ಮರಿಗಳು ಬಹಳ. ಈತನು ನಾಳೆಗೆಂದು ಒಂದು ಕಾಸನ್ನೂ ಇಡುವು ದಿಲ್ಲ. ಎಲ್ಲವನ್ನೂ ತಿಂದು ಬಿಡುವನು; ಸ್ವಲ್ಪ ತಿಳಿಯ ಹೇಳಿರಿ ಎಂದು ಬಿನ್ನಯಿ ಸಿದಳು. ಬ್ರಾಹ್ಮಣನು—ಬಾಯಿಂದ ಹೇಳಿದರೆ ಪ್ರಯೋಜನವಾಗುವುದಿಲ್ಲ; ಆತನ ಈ ಬೇನೆಗೆ ಹಣವೇ ಮದ್ದು; ಸ್ವಲ್ಪ ಧನಸಾಹಾಯ್ಯವನ್ನು ಮಾಡುವ; ಈ ಚೀಲದಲ್ಲಿ ೯೯ ರು|| ಗಳಿರುವುವು. ಈ ಚೀಲವು ಅವನ ಕೈಯಲ್ಲಿ ಬೀಳು ವಂತೆ ಮಾಡು ಎಂದನು. ಬ್ರಾಹ್ಮಣನ ಮಡದಿಯು—ಒಳ್ಳೆಯ ಉಪಾಯವಿದು; ಇದಿಷ್ಟು ಹಣವು ಅವನ ಕೈಗೆ ಸಿಕ್ಕಿದರೆ ಎರಡು ದಿನಗಳಲ್ಲಿ ಹಾರಿಸಿ ಬಿಡುವನು. ಎಂದಳು. ಬ್ರಾಹ್ಮಣನು—ನಾನು ಹೇಳಿದಂತೆ ಮಾಡಿನೋಡು; ಪ್ರಯೋಜನ ವಾಗದಿರದು ಎಂದನು. ಬ್ರಾಹ್ಮಣನ ಮಡದಿಯು ಅನುಮಾನಿಸದೆ ೯೯ ರು||ಗಳ ಚೀಲವನ್ನೊಯ್ದು ಆ ದಿನ ಸಂಜೆಯ ಮುಂದೆ ಬಡಗಿಯ ಮನೆಯಲ್ಲಿ ಅವನು ಅರಿಯದಂತೆ ಇಟ್ಟು ಬಂದಳು. ಮರುದಿನ ಬಡಗಿಯು ಆ ಚೀಲವನ್ನು ಕಂಡು ಹರ್ಷಬಟ್ಟು ಅದರೊಳಗಿನ ರೂಪಾಯಿಗಳನ್ನು ಎಣಿಸಿ ನೋಡಿದನು. ಅಹಾ! ೯೯ ರು|| ಗಳು; ಇವಕ್ಕೆ ಇನ್ನು ಒಂದೇ ಒಂದನ್ನು ಸೇರಿಸಿದರೆ ೧೦೦ ರು|| ಗಳು

ಆಗುವುವಲ್ಲವೇ; ಈ ದಿನವೇ ಈ ಚೀಲದಲ್ಲಿ ಇನ್ನೊಂದು ರೂಪಾಯಿಯನ್ನು ಸೇರಿಸಿಬಿಡುವೆನು ಎಂದು ಆತುರನಾದನು. ಮರುದಿವಸದಿಂದ ಅವನು ಕೈ ಬಿಗಿ ಹಿಡಿದು ವೆಚ್ಚ ಮಾಡುತ್ತ ಒಂದೆರಡು ದಿವಸಗಳಲ್ಲಿ ಒಂದು ರೂಪಾಯಿಯನ್ನು ಉಳಿಸಿ ನೂರರ ಗಂಟನ್ನು ಮಾಡಿಗನು. ಮುಂದೆ ಆತನ ಕಣ್ಣಿದಿರಿಗೆ ಇನ್ನೂರರ ಗಂಟು ಬಂದು ನಿಂತಿತು. ಒಂದೊಂದರಂತೆ ಮತ್ತೆ ಸೇರಿಸುತ್ತ ಇನ್ನೂರನ್ನು ಮಾಡಬೇಕೆಂದು ತವಕಿಸತೊಡಗಿದನು. ಈ ಮೇರೆಗೆ ಮಿತವ್ಯಯದ ಅಭ್ಯಾಸ ವಾಗಲು ಆತನು ಕುಡಿತವನ್ನು ಬಿಟ್ಟನು. ಸುಖವಿಲಾಸಗಳನ್ನು ಕಡಿಮೆಮಾಡಿ ದನು. ಮಕ್ಕಳನ್ನು ತನ್ನೊಡನೆ ದುಡಿತದಲ್ಲಿ ಸೇರಿಸಿಕೊಂಡು ಅವರಿಗೆ ಕೆಲಸ ವನ್ನು ಕಲಿಸಿ ಅವರಿಂದಲೂ ಕೆಲಸವನ್ನು ಮಾಡಿಸತೊಡಗಿದನು. ಇದರಿಂದ ಅವನ ಹುಟ್ಟುವಳಿಯು ಬೆಳೆದುದಲ್ಲದೆ ಮಕ್ಕಳ ಕಲ್ಯಾಣವೂ ಆಯಿತು. ಹೀಗೆ ಮಕ್ಕಳೂ ತಾನೂ ಮನಮುಟ್ಟಿ ದುಡಿಯುತ್ತಲೂ ವೆಚ್ಚವನ್ನು ಕಡಿಮೆಮಾಡು ತ್ತಲೂ ಹೋಗಲು ಕೆಲವು ವರ್ಷಗಳಲ್ಲಿ ಆತನ ಬಳಿಯಲ್ಲಿ ಸಾವಿರಾರು ರೂಪಾ ಯಿಗಳ ಗಂಟು ಕೂಡಿತು.

ಆಗ ಬ್ರಾಹ್ಮಣನು ತಾನು ಮಾಡಿದ ಉಪಾಯವನ್ನು ಬಡಗಿಗೆ ಹೇಳಿ ದನು. ಕೃತಜ್ಞನಾದ ಬಡಗಿಯು ಮಕ್ಕಳೊಡನೆ ಆ ಬ್ರಾಹ್ಮಣನ ಪಾದಗಳಿ ಗೆರಗಿ—ಸ್ವಾಮಿ, ದೇವರೂ, ಬ್ರಾಹ್ಮಣರೂ ನಿರ್ನಿಮಿತ್ತವಾಗಿ ದೀನ ದುರ್ಬ ಲರ ಮೇಲೆ ದಯೆದೋರಿ ಅವರ ಉದ್ಧಾರವನ್ನು ಮಾಡಬಲ್ಲರು; ತಾವು ನನ್ನನ್ನು ಉದ್ಧರಿಸಿದಿರಿ; ತಮ್ಮ ರೂಪಾಯಿಗಳನ್ನು ದಯೆಮಾಡಿ ಸ್ವೀಕರಿಸಬೇಕು ಎಂದು ಬೇಡಿಕೊಂಡು ೯೯ ರೂ. ಗಳ ಗಂಟನ್ನು ಬ್ರಾಹ್ಮಣನ ಮುಂದೆ ಇರಿಸಿದನು. ಬ್ರಾಹ್ಮಣನು ಆ ರೂಪಾಯಿಗಳನ್ನು ಊರ ಕೆರೆಯ ಕೆಸರನ್ನು ತೆಗೆಯಿಸುವ ಕೆಲಸಕ್ಕೆ ಕೊಟ್ಟುದಲ್ಲದೆ ಆ ಬಡಗಿಯಿಂದಲೂ ಆ ಕೆಲಸಕ್ಕೆ ಕೆಲವು ಹಣವನ್ನು ಕೊಡಿಸಿದನು.

ಮಿತವ್ಯಯಕ್ಕೆ ಸದ್ವ್ಯಯವು ಜೋಡಾದರೆ ಮನುಷ್ಯನ ಕಲ್ಯಾಣವಾಗು ವುದು; ಕಾರ್ಪಣ್ಯವೂ ಅತಿವ್ಯಯವೂ ಶ್ರೇಯಸ್ಕರವಲ್ಲ. ಮಿತವ್ಯಯಶೀಲನು ತಾನು ಪರರಿಗೆ ಭಾರವಾಗದೆ ದರಿದ್ರರಿಗೆ ನೆರವಾಗಬಲ್ಲನು.

---

ಲೋಕಕಾರ್ಯವೂ ದಾಕ್ಷಿಣ್ಯವೂ.

## ೫೮ ವಾಶಿಂಗ್ಟನ್.

ಮಹಾತ್ಮನಾದ ಜಾರ್ಜ ವಾಶಿಂಗ್ಟನನು ಅಮೇರಿಕದ ಸಂಯುಕ್ತ ಸಂಸ್ಥಾನದ ಮೊದಲನೆಯ ಪ್ರೆಸಿಡೆಂಟನಾಗಿರುವಾಗ ಒಮ್ಮೆ ಸರಕಾರದ ಒಂದು ದೊಡ್ಡ ಅಧಿಕಾರಸ್ಥಳವು ತೆರವಾಗಿದ್ದಿತು. ಆತನ ಪ್ರೀತಿಯವನೂ, ಅನುಯಾಯಿಯೂ ಆದ ಒಬ್ಬ ಮನುಷ್ಯನು ಆ ಸ್ಥಳವನ್ನು ಅಪೇಕ್ಷಿಸಿದನು. ಈ ಮನುಷ್ಯನು ಅಮೇರಿಕದ ಸ್ವಾತಂತ್ರ್ಯಕ್ಕಾಗಿ ನಡೆದ ಯುದ್ಧದಲ್ಲಿಯೂ, ಮುಂದೆಯೂ ಯಾವಾಗಲೂ ವಾಶಿಂಗ್ಟನನ ಬಳಿಯಲ್ಲಿದ್ದು ಎಲ್ಲ ವಿಷಯಗಳಲ್ಲಿ ಆತನಿಗೆ ನೆರವಾಗುತ್ತ ಬಂದಿದ್ದನು. ಈ ಸ್ಥಳವನ್ನು ಬೇಡುವವರಲ್ಲಿ ವಾಶಿಂಗ್ಟನನ ವಿರೋಧಿಯೂ ಒಬ್ಬನಿದ್ದನು. ಈ ಮನುಷ್ಯನು ರಾಜನೀತಿವಿಚಾರದಲ್ಲಿ ಒಮ್ಮೆ ವಾಶಿಂಗ್ಟನನಿಗೆ ಪೂರ್ಣ ವಿರುದ್ಧಮತವುಳ್ಳವನಾಗಿದ್ದನು. ಆದರೆ ಈ ಮನುಷ್ಯನು ಬಹು ಸಮರ್ಥನು. ಕೊನೆಗೆ ಆ ಅಧಿಕಾರಸ್ಥಳವನ್ನು ವಾಶಿಂಗ್ಟನನು ತನ್ನ ಈ ವಿರೋಧಿಗೇ ಕೊಟ್ಟನು.

ಕೆಲವರು ನಿಮ್ಮ ಸ್ನೇಹಿತನಿಗೆ ಆ ಸ್ಥಳವನ್ನು ಏಕೆ ಕೊಡಲಿಲ್ಲವೆಂದು ಕೇಳಲು—ನಾನು ಈಗ ಅಧಿಕಾರಸ್ಥಳವನ್ನು ಕೊಟ್ಟ ಮನುಷ್ಯನು ಬಹಳ ಸಮರ್ಥನೆಂಬುದನ್ನು ಆತನು ನನ್ನೊಡನೆ ವಿರೋಧವನ್ನು ಮಾಡಿದ ಕಾಲದಲ್ಲಿಯೇ ತಿಳಿದುಕೊಂಡಿದ್ದೆನು. ಪ್ರಜೆಗಳ ಕಾರ್ಯವನ್ನು ಆಕ್ಷೇಪವಿಲ್ಲದಂತೆ ಸಾಗಿಸುವಲ್ಲಿ ಆತನೇ ಎಲ್ಲರಿಗಿಂತ ಯೋಗ್ಯನಾಗಿರುವನು. ನನ್ನ ಸ್ನೇಹಿತನು ಒಳ್ಳೆಯ ಮನುಷ್ಯನು ಅಹುದು; ಆದರೆ ಕಾರ್ಯನಿರ್ವಾಹಸಾಮರ್ಥ್ಯದ ದೃಷ್ಟಿಯಿಂದ ನೋಡಿದರೆ ಆತನಷ್ಟು ಸಮರ್ಥನಲ್ಲ; ನನ್ನ ಸ್ನೇಹಿತನು ನನ್ನ ಮನೆಯಲ್ಲಿ ನನಗೆ ಅರಸನು; ಆತನು ಹೇಳಿದುದೇ ಪೂರ್ವದಿಕ್ಕು. ಆದರೆ ಆಫೀಸಿನಲ್ಲಿ—ಯಾವನು ಪ್ರಜಾಕಾರ್ಯವನ್ನು ನಿರ್ವಹಿಸಬಲ್ಲನೋ ಆತನೇ ನನಗೆ ಆದರಣೀಯನು. ಎಂದು ಹೇಳಿದನು.

ಸರಕಾರದ ಖುರ್ಚಿಯ ಮೇಲೆ ಕುಳಿತಾಗ ಯಾವನು ತನ್ನ ಊರು, ಜಾತಿ, ಮತ, ಆಪ್ತೇಷ್ಟರು ಮೊದಲಾದ ಸಂಬಂಧಗಳನ್ನು ಮರೆತು ಆ ಅಧಿಕಾರ ಸ್ಥಳದೊಡನೆ ತನ್ಮಯತೆಯನ್ನು ಪಡೆವನೋ ಆತನೇ ಯೋಗ್ಯನಾದ ಅಧಿಕಾರಿಯು. ಉಳಿದವರು ಅಧಿಕಾರವಿಲ್ಲದ ಸಾಮಾನ್ಯಜನರಿಗಿಂತ ಹೆಚ್ಚಿನ ಕೇಡನ್ನು ಮಾಡುವರು. ಅವರು ದೇಶದ್ರೋಹಿಗಳೂ ಅಹುದು, ರಾಜದ್ರೋಹಿಗಳೂ ಅಹುದು.

ಸನ್ಮಾರ್ಗದಕ್ಷಿಯೋ ಶಾಂತಿಯು.

## ೫೯ ವಾಶಿಂಗ್‌ಟನ್-ನೆಪೋಲಿಯನ್.

ವಾಶಿಂಗ್ಟನನು ಸ್ವದೇಶದ ಉದ್ಧಾರಕ್ಕೋಸ್ಕರ ಯುದ್ಧವನ್ನು ಮಾಡಿದನು. ಆತನ ಗುಣಗಳಿಗೂ, ದಕ್ಷತೆಗೂ ಮರುಳಾದ ಅಮೇರಿಕನರು ಅವನನ್ನು ಮುಖ್ಯ ಸೇನಾಪತಿಯನ್ನೂ, ಸಂಯುಕ್ತಸಂಸ್ಥಾನದ ಪ್ರಜಾಪ್ರತಿನಿಧಿಸಭೆಯ ಮೊದಲನೆಯ ಅಧ್ಯಕ್ಷನನ್ನೂ ಮಾಡಿದರು. ಅವನು ಸಂಯುಕ್ತಸಂಸ್ಥಾನದ ಪ್ರಜಾಸತ್ತಾತ್ಮಕರಾಜ್ಯದ ಸುವ್ಯವಸ್ಥೆಯನ್ನು ಮಾಡಿದಕೂಡಲೆ ಕೆಲಸವನ್ನು ಬಿಟ್ಟುಕೊಟ್ಟು ವಿಶ್ರಾಂತಿಯನ್ನು ಪಡೆದು ಸಾಮಾನ್ಯ ಸದ್ಗೃಹಸ್ಥರಂತೆ ತನ್ನ ಹೊಲಮನೆ ತೋಟಪಟ್ಟಿ ಮೊದಲಾದುವುಗಳನ್ನು ನೋಡಿಕೊಳ್ಳುತ್ತ ಈಶ್ವರಚಿಂತನದಲ್ಲಿ ಕಾಲವ ಕಳೆದನು. ಪೃಥ್ವಿಯ ಮೇಲಿನ ಯಾವನೊಡನೆಯೂ ಆತನ ವೈಯಕ್ತಿಕ ದ್ವೇಷವಿರಲಿಲ್ಲ. ಆತನ ನೆನಪಾದ ಕೂಡಲೆ ಆತನ ವಿಷಯವಾಗಿ ಪ್ರೇಮ ವಿಶ್ವಾಸಗಳನ್ನು ತೋರ್ಪಡಿಸದ ಮನುಷ್ಯನು ಈವೊತ್ತು ಜಗತ್ತಿನಲ್ಲಿ ಯಾವನೂ ಇಲ್ಲವೆಂದು ಹೇಳಬಹುದು. ಆತನು ಸದಾಚಾರಿಯೂ, ಉದಾತ್ತಹೃದಯನೂ, ಸ್ವದೇಶಭಕ್ತನೂ, ಕಾರ್ಯದಕ್ಷನೂ, ಸ್ವಾರ್ಥರಹಿತನೂ, ಆಸ್ತಿಕನೂ, ಆದರ್ಶ ಸದ್ಗೃಹಸ್ಥನೂ ಆಗಿದ್ದನು. ಆತನು ಯಾರೊಡನೆ ಯುದ್ಧಮಾಡಿದನೋ ಆ ಇಂಗ್ಲಿಶರೇ ಈಗ ಆತನ ವಿಷಯದಲ್ಲಿ ಪೂಜ್ಯಬುದ್ಧಿಯುಳ್ಳವರಾಗಿರುವರು. ವಾಶಿಂಗ್ಟನನು ಮಾನವಜನ್ಮದಲ್ಲಿ ಆತ್ಮೋನ್ನತಿಯನ್ನು ಪಡೆದು ಶಾಂತಿಯಿಂದ ಆಯುಷ್ಯವನ್ನು ಕಳೆದ ಮಹಾಪುರುಷರಲ್ಲೊಬ್ಬನು.

ನೆಪೋಲಿಯನನಲ್ಲಿಯೂ ಕರ್ತೃತ್ವಶಕ್ತಿಯು ಅಪಾರವಾಗಿದ್ದಿತು. ಈತನೂ ಫ್ರಾನ್ಸದ ಕಾಯದೆ (ನೆಪೋಲಿಯನ್ ಕೋಡ್), ರಾಜಧಾನಿಯಾದ ಪಾರಿಸದ ವೈಭವವನ್ನು ಹೆಚ್ಚಿಸುವುದು, ದೇಶದೊಳಗೂ ಹೊರಗೂ ಫ್ರಾನ್ಸದ ಗೌರವವನ್ನು ಬೆಳೆಯಿಸುವುದು ಮೊದಲಾದ ಕೆಲಸಗಳಲ್ಲಿ ತನ್ನ ಶಕ್ತಿಯನ್ನು ವಿನಿಯೋಗಿಸಿದನೆಂಬುದು ನಿಜ. ಆದರೆ ಈತನು ಸ್ವಾರ್ಥಪರನು. ಈತನು ಪ್ರಜಾಸತ್ತಾತ್ಮಕ ರಾಜ್ಯದ ನೌಕರಿಯಲ್ಲಿ ಘನತೆಯನ್ನು ಹೊಂದಿದವನು; ಕೊನೆಗೆ ಆ ರಾಜ್ಯಪದ್ಧತಿಯನ್ನೇ ಹೊಡೆದು ಹಾಕಿ ತಾನೇ ಸಮ್ರಾಜನಾದನು. ಈತನು ಜೋಸೇಫಿನಳೊಡನೆ ಮೊದಲು ಮದುವೆಯಾಗಿ ತನ್ನ ಸಂಸಾರಕ್ಕೆ ಧನಾನುಕೂಲತೆಯನ್ನು

ಮಾಡಿಕೊಂಡನು. ಬಳಿಕ ಆ ಧರ್ಮಪತ್ನಿಯನ್ನು ಬಿಟ್ಟು ಆಸ್ಟ್ರಿಯದ ಬಾದಶಹನ ಮಗಳನ್ನು ಮದುವೆಯಾದನು. ತಾನು ದೊಡ್ಡಮನೆತನದವನೆನಿಸಿಕೊಳ್ಳ ಬೇಕೆಂಬುದೇ ಈ ಮದುವೆಯ ಉದ್ದೇಶ್ಯವಾಗಿದ್ದಿತು. ಈತನು ಹಲವು ಜನಾಂಗಗಳ ಸ್ವಾತಂತ್ರ್ಯವನ್ನು ಅಪಹರಿಸಿ ತನ್ನ ಸೋದರರನ್ನು ಅವುಗಳ ರಾಜ ರನ್ನಾಗಿ ಮಾಡಿದನು. ತನ್ನ ಮೇಲೆ ಅತಿಶಯಭಕ್ತಿಯನ್ನಿಟ್ಟುಕೊಂಡಿದ್ದ ಫ್ರೆಂಚ್ ಸೈನ್ಯವನ್ನು ಆತನು "ತೋಫಿನ ಆಹಾರ (ಫುಡ್ ಫಾರ್ ಕ್ಯಾನನ್)" ಎಂದೆನ್ನುವುದಕ್ಕೂ ಸಂಕೋಚಬಡುತ್ತಿರಲಿಲ್ಲ. ವಾಟರ್ಲೂ ಕಾಳಗದಲ್ಲಿ ಇದಿ ರಿಸಿ ಯುದ್ಧಮಾಡಿ ತನ್ನನ್ನು ಸೋಲಿಸಿದ ಡ್ಯೂಕ ಆಫ್ ವೆಲಿಂಗ್ಟನನ ಮೇಲೆ ಈತನ ವೈಯಕ್ತಿಕ ದ್ವೇಷವು ಪರಮಾವಧಿಯಾಗಿದ್ದಿತು. ಆತನನ್ನು ಗುಪ್ತ ವಾಗಿ ಕೊಲೆಮಾಡುವುದಕ್ಕೆ ಪ್ರವರ್ತಿಸಿದ ಮನುಷ್ಯನಿಗೆ ಈತನು ತನ್ನ ಮೃತ್ಯು ಪತ್ರದಲ್ಲಿ ೧೦ ಸಾವಿರ ಫ್ರಾಂಕುಗಳನ್ನು ಸಲಿಸುವಂತೆ ಬರೆದಿಟ್ಟಿದ್ದನು. ಇದು ನೀಚಮನೋವೃತ್ತಿಯ ಪರಮಾವಧಿಯಲ್ಲವೇ? ಮರಣಕಾಲದ ಅತ್ಯವಸ್ಥೆಯಲ್ಲಿ ಈತನು ಕೊಲ್ಲು, ಹೊಡೆ, ಕತ್ತರಿಸು, ಇತ್ತ ಓಡು, ಅತ್ತ ತೋಫನ್ನು ಹೂಡು ಮೊದಲಾದ ಅಪ್ಪಣೆಗಳನ್ನು ಕೊಡುತ್ತಲೇ ಪ್ರಾಣತ್ಯಾಗಮಾಡಿದನು!

---

## ೭೦. ಅಮೇರಿಕದ ಹುಡುಗನು.

ಸಂಯಮನವೂ ಸ್ವಾವಲಂಬನವೂ.

ಅಮೇರಿಕದಲ್ಲಿ ಒಬ್ಬ ಹುಡುಗನು ಒಮ್ಮೆ ಒಬ್ಬ ಶ್ರೀಮಂತನ ಬಳಿಗೆ ಬಂದು, ತನ್ನ ಶಿಕ್ಷಕನ ಪ್ರಶಂಸಾಪತ್ರವನ್ನು ತೋರಿಸಿ ಧನಸಾಹಾಯ್ಯವನ್ನು ಬೇಡಿದನು. "ಹುಡುಗನು ಯೋಗ್ಯನು, ಈತನಿಗೆ ಕಲಿಯುವುದಕ್ಕೆ ತಾಯಿ ಯಿಂದ ಧನಸಹಾಯವು ದೊರೆಯುವಂತಿಲ್ಲ; ಶ್ರೀಮಂತರಿಂದ ಸ್ವಲ್ಪ ಸಹಾಯವು ದೊರೆತರೆ ಹುಡುಗನ ಶಿಕ್ಷಣವು ಮುಗಿಯುವಂತಿದೆ" ಎಂದು ಪ್ರಶಂಸಾಪತ್ರದಲ್ಲಿ ಬರೆದಿದ್ದಿತು. ಆ ಶ್ರೀಮಂತನು-'ಅಯ್ಯಾ, ನೀನು ಚಹದ ಅಂಗಡಿಗೆ ಹೋಗುತ್ತಿರು ವೆಯಾ, ನಿನಗೆ ಚಿರೂಟು ಸೇದುವ ರೂಢಿಯುಂಟೇ' ಎಂದು ಕೇಳಿದನು. ಹುಡು ಗನು ಕೆಲಮಟ್ಟಿಗೆ ಉಂಟು ಎಂದು ಹೇಳಿದನು. ಶ್ರೀಮಂತನು—ಇದನ್ನೆಲ್ಲ ಪೂರ್ಣವಾಗಿ ಬಿಡು; ಒಂದು ವರ್ಷದ ತರುವಾಯ ನನ್ನ ಬಳಿಗೆ ಬಾ ಎಂದನು. ಹುಡುಗನು ಮನೆಗೆ ಹೋದಬಳಿಕ ತಾಯಿಯೊಡನೆ ಆಲೋಚಿಸಿ ಅನ್ನ ವಸ್ತ್ರ, ಮೊದಲಾದ ಎಲ್ಲ ವಿಷಯಗಳಲ್ಲಿಯೂ ವೆಚ್ಚವನ್ನು ಹಿಡಿತದಿಂದ ಮಾಡತೊಡಗಿ

ದನು; ಚಹ ಮೊದಲಾದ ವಿಲಾಸದ ವೆಚ್ಚವನ್ನು ಪೂರ್ಣವಾಗಿ ನಿಲ್ಲಿಸಿದನು. ಇದರಿಂದ ಮನಸ್ಸು ದೃಢವಾಯಿತು; ಏಕಾಗ್ರತೆಯು ಬಳೆಯಿತು. ‘ ಫೀ ’ ಪ್ರಧಾನವಾದ ಶಾಲೆಯನ್ನು ಬಿಟ್ಟು ಮನೆಯಲ್ಲಿಯೇ ಕಲಿಯುತ್ತ, ಅಂಗಡಿಯಲ್ಲಿ ಒಂದು ಸಣ್ಣ ಕೆಲಸವನ್ನು ಹಿಡಿದನು. ಒಂದು ವರ್ಷದ ತರುವಾಯ ಹುಡುಗನು, ತನ್ನ ಸಂಸಾರವು ಕೊರತೆಯಿಲ್ಲದೆ ಸುಯಂತ್ರಿತವಾಗಿ ನಡೆದಿರುವುದನ್ನೂ ವಿದ್ಯಾಭ್ಯಾಸವೂ ಮೊದಲಿಗಿಂತ ಮುಂದುವರಿದಿರುವುದನ್ನೂ ಕಂಡನು.

ಬಳಿಕ ಹುಡುಗನು ಆ ಶ್ರೀಮಂತನ ಬಳಿಗೆ ಹೋಗಿ ಕೃತಜ್ಞತೆಯಿಂದ—‘ರಾಯರೇ, ತಮ್ಮ ಉಪದೇಶದ ಸಹಾಯವು ನನಗೆ ಬಹಳ ಉಪಕಾರ ಮಾಡಿತು; ಈಗ ತಮ್ಮ ಧನಸಹಾಯವು ಅವಶ್ಯವಿಲ್ಲ’ ಎಂದು ಹೇಳಿದನು. ಶ್ರೀಮಂತನು ಈ ಸ್ಥಿತಿಯು ಹೇಗೆ ಒದಗಿತೆಂದು ಕೇಳಲು ಹುಡುಗನು—ತನ್ನಲ್ಲಿ ಸ್ವಲ್ಪ ವಿಲಾಸವು ( ಚೈನಿ ) ಕೂಡ ಇರುವವರೆಗೂ ಪರರ ಧನಸಹಾಯವನ್ನಪೇಕ್ಷಿಸುವುದು ಅಸಂಗತವೆಂದು ತಮ್ಮ ಉಪದೇಶದಿಂದ ಅರಿತೆನು; ನಾನು ವಿಲಾಸವನ್ನು ಪೂರ್ಣವಾಗಿ ತೊರೆದು, ಮನಸ್ಸಿನಲ್ಲಿ ಮಂಡಿಗೆ ಮಾಡುತ್ತ ಕುಳಿತುಕೊಳ್ಳುವುದಕ್ಕಿಂತ ಕಾರ್ಯಕಾರಿ ಬುದ್ಧಿಯನ್ನು ಹಿಡಿದು, ಯಾವ ಕೆಲಸವು ದೊರೆಯುವುದೋ ಅದನ್ನೇ ತೃಪ್ತಿಯಿಂದ ಮಾಡುವುದು ಲೇಸೆಂದು ನಿಶ್ಚಯಿಸಿ ಅದರಂತೆ ನಡೆದೆನು. ಈಗ ನನಗೆ ಯಾವ ಕೊರತೆಯೂ ಇಲ್ಲ ಎಂದು ಹೇಳಿದನು. ಇದನ್ನು ಕೇಳಿ ಶ್ರೀಮಂತನು ತನ್ನ ಉಪದೇಶದ ಗುಟ್ಟನ್ನು ಆ ಹುಡುಗನು ಅರಿತನೆಂದು ಸಂತೋಷಪಟ್ಟು ಇನ್ನು ಈತನು ಉತ್ಕರ್ಷದ ದಾರಿಯ ಹಿಡಿದನೆಂದು ನಂಬಿ ತನ್ನ ಕಾರಖಾನೆಯಲ್ಲಿ ಒಂದು ಕೆಲಸವನ್ನು ಕೊಟ್ಟನು. ಕೃತಜ್ಞನಾದ ಆ ಹುಡುಗನು ನಂಬುಗೆಯಿಂದ ಕೆಲಸವನ್ನು ಮಾಡುತ್ತ ಮಾಡುತ್ತ ಕೊನೆಗೆ ಆ ಕಾರಖಾನೆಯಲ್ಲಿ ವ್ಯವಸ್ಥಾಪಕ ( ಮ್ಯಾನೇಜರ್ ) ನಾದನು.

ಯಾರೂ ವಿಲಾಸಿಗಳಾಗದಿರುವುದು ದೇಶಕ್ಕೆ ಕ್ಷೇಮವು; ನಮ್ಮ ದೇಶದಲ್ಲಿ ಭೋಜನಾಲಯದ ದುಡ್ಡಿಗೆ ಗತಿಯಿಲ್ಲದ ವಿದ್ಯಾರ್ಥಿಗಳೂ, ಪರರ ದುಡ್ಡಿನಿಂದ ಬಾಳುವ ವಿದ್ಯಾರ್ಥಿಗಳೂ ಕೂಡ ಅನಾವಶ್ಯಕವಾದ ವಿಲಾಸದ ವೆಚ್ಚವನ್ನು ಮಾಡುತ್ತಿರುವುದಕ್ಕೆ ಅವರಿಗೆ ನಾಚಿಕೆಯೆನಿಸದಿದ್ದರೂ ನೋಡುವವರಿಗೆ ನಾಚಿಕೆಯೆನಿಸುತ್ತಿದೆ.

---

ಕರ್ತವ್ಯಪರಾಯಣತೆ.

## ೬೧ ಇಂಗ್ಲಿಷ್ ಕೆಪ್ಟನ್.

ಇಂಗ್ಲಂಡದ ದಂಡೆಯ ಬಳಿಯಲ್ಲಿ ಒಮ್ಮೆ ಒಂದು ಹಡಗಿನ ತಳವು ಒಡೆಯಲು ಅದು ಮುಳುಗತೊಡಗಿತು. ಇಂಗ್ಲಿಷರಲ್ಲಿ ನಾವಿಕರ ಕರ್ತವ್ಯವಿಷಯಕವಾದ ನಿಯಮಗಳು ಉಚ್ಚತರವಾಗಿದ್ದು ಅವರಲ್ಲಿ ದೃಢಮೂಲವಾಗಿ ನೆಲಸಿರುವವು. ಆ ನಿಯಮಗಳನ್ನನುಸರಿಸಿ ನೌಕಾಧಿಪತಿಯು ಮೊದಲು ಹೆಂಗುಸರನ್ನೂ ಹುಡುಗರನ್ನೂ ಬಳಿಕ ಗಂಡುಸರನ್ನೂ ದಂಡೆಗೆ ಮುಟ್ಟಿಸುವಂತೆ ಯತ್ನ ಮಾಡುವುದು ಆತನ ಕರ್ತವ್ಯವು. ಹಡಗಿಗೆ ಅಪಘಾತವೊದಗಿದಾಗ ಜನರು ಪಾರಾಗುವುದಕ್ಕಾಗಿ ಹಡಗಿನಲ್ಲಿ ಲಾಯಿಫ್‌ಬೋಟ್, ಲಾಯಿಫ್‌ಬೋಯ್, ಲಾಯಿಫ್‌ಬೇಲ್ ಎಂಬ ಸಾಧನಗಳಿರುವವು. ಲಾಯಿಫ್‌ಬೋಟ್ ಎಂಬಿವು ಜನರು ಕುಳಿತುಕೊಂಡು ಹೋಗಬಹುದಾದ ಸಣ್ಣ ನೌಕೆಗಳು; ಇವು ಸಾಧಾರಣವಾಗಿ ಹಡಗಿನಲ್ಲಿ ಕುಳಿತಿರುವ ಜನರಿಗೆ ಸಾಕಾಗುವಷ್ಟು ಇರುವವು; ಲಾಯಿಫ್‌ಬೋಯ್ ಎಂಬಿವು ಪೊಳ್ಳುಬಳೆಯಾಕಾರದ ಒಂದು ತರದ ಈಸುವ ಸಾಧನಗಳು; ಲಾಯಿಫ್‌ಬೇಲ್ ಇಲ್ಲವೆ ಲಾಯಿಫ್‌ಜಾಕೆಟ್ ಎಂಬಿವು ನೀರಲ್ಲಿ ತೇಲಿಸುವ ಒಂದು ತರದ ಕವಚಗಳು. ನೌಕಾಧಿಪತಿಯು ಲಾಯಿಫ್‌ಬೋಟುಗಳಿಂದ ಹಡಗಿನಲ್ಲಿಯ ಜನರನ್ನು ದಂಡೆಗೆ ಮುಟ್ಟಿಸುವ ವ್ಯವಸ್ಥೆಯ ಮಾಡಿದನು. ಬಳಿಕ ಲಾಯಿಫ್‌ಬೋಯ್, ಲಾಯಿಫ್‌ಬೇಲ್ ಇವುಗಳಿಂದ ಹಡಗದಲ್ಲಿ ಕೆಲಸಮಾಡುವ ಎಲ್ಲ ನಾವಿಕರೂ ಈಸಿ ಪಾರಾಗಬೇಕೆಂದು ಅಪ್ಪಣೆಮಾಡಿದನು. ನೌಕಾಧಿಪತಿಗೆ ಒಂದು ಲಾಯಿಫ್‌ಜಾಕೆಟು ಮಾತ್ರ ಉಳಿದಿತ್ತು. ಅದನ್ನು ತೊಟ್ಟುಕೊಂಡು ಆತನು ಸಮುದ್ರದಲ್ಲಿ ಈಸುವುದಕ್ಕೆ ಇನ್ನು ನೀರಲ್ಲಿಳಿಯುವವನು, ಇಷ್ಟರಲ್ಲಿ ಹಡಗಿನ ಒಂದು ಕೋಣೆಯೊಳಗಿಂದ ತನ್ನ ಹತ್ತಿರ ಬರುವ ಒಬ್ಬ ಹುಡುಗನನ್ನು ಕಂಡನು. ಕೆಪ್ಟನನು ನೀನಾರು? ಈ ವರೆಗೆ ಏಕೆ ಬರಲಿಲ್ಲ ಎಂದು ಆಶ್ಚರ್ಯದಿಂದ ಕೇಳಿದನು. ಹುಡುಗನು—ನನ್ನಲ್ಲಿ ಹಡಗಿನ ಬಾಡಿಗೆಯ ಹಣವು ಇರಲಿಲ್ಲ; ಆದುದರಿಂದ ನಾನು ಯಾರೂ ಕಾಣದಂತೆ ಮರೆಯಲ್ಲಿ ಅಡಗಿಕೊಂಡು ಕುಳಿತಿದ್ದೆನು. ಎಂದು ಹೇಳಿದನು. ನೌಕಾಧಿಪತಿಯು ಕ್ಷಣಕಾಲ ಸ್ತಬ್ಧನಾದನು; "ಹುಡುಗನನ್ನು ಬದುಕಿಸುವುದಾದರೆ ನಾನು ಸಾಯಲೇಬೇಕು; ನನ್ನ ಮಕ್ಕಳು ಸಣ್ಣವರು; ನಾನು ತೀರಿದರೆ ಹೆಂಡತಿಯೂ ಮಕ್ಕಳೂ ಅನಾಥರಾಗುವರು; ಇದೆಲ್ಲವೂ ನಿಜ; ಆದರೆ ನನ್ನ ಕರ್ತವ್ಯವನ್ನು ಬಿಡಲೇ? ಅದೆಂದಿಗೂ

ಆಗದು; ನನ್ನ ಹೆಂಡತಿ ಮಕ್ಕಳ ಭಾರವನ್ನು ಜಗದೀಶ್ವರನ ಮೇಲೆ ಇಟ್ಟು ನಾನು ನನ್ನ ಕರ್ತವ್ಯವನ್ನೇ ಮಾಡುವೆನು." ಈ ಮೇರೆಗೆ ವಿಚಾರಮಾಡಿ ಆತನು ತಾನು ತೊಟ್ಟುಕೊಂಡ ಲಾಯಿಫ್‌ಜಾಕೆಟನ್ನು ಕಳೆದು ಬಾಲಕನಿಗೆ ತೊಡಿಸಿ ಆತನನ್ನು ನೀರಲ್ಲಿಳಿಸಿದನು.

ಕರ್ತವ್ಯಪರಾಯಣನಾದ ಆ ಕಪ್ತನನೊಡನೆ ಆ ಹಡಗು ಮುಂದೆ ಒಂದು ಕ್ಷಣದಲ್ಲಿ ಮುಳುಗಿ ಹೋಯಿತು!

---

ಸಹಾನುಭೂತಿ.

## ೬೨. ಅಬ್ರಹಾಮ್‌ಲಿಂಕನ್.

ಉತ್ಕಟವಾದ ಸಹಾನುಭೂತಿಯು ಮನುಷ್ಯನನ್ನು ಪರೋಪಕಾರದಲ್ಲಿ ತೊಡಗಿಸುವದು. ಅಮೇರಿಕದ ಸಂಯುಕ್ತಸಂಸ್ಥಾನಗಳ ಸಭಾಪತಿ (ಪ್ರೆಸಿಡೆಂಟ್) ಯಾದ ಅಬ್ರಹಾಮ್‌ಲಿಂಕನನು ಮೊದಲು ಒಂದು ಅಂಗಡಿಯಲ್ಲಿ ಕೆಲಸಕ್ಕೆ ನಿಂತು ಪರರಿಂದ ಪುಸ್ತಕಗಳನ್ನು ಕಡತಂದು ಓದುತ್ತಿರುವಾಗ ಒಂದಾನೊಂದುದಿವಸ ಎವ್ಹಟೆಂಟ್ ಎಂಬ ಮನುಷ್ಯನು ದಾರುಣವಾದ ಚಳಿಯಲ್ಲಿ ಕಟ್ಟಿಗೆಯೊಡೆಯುತ್ತಿರುವುದನ್ನು ಕಂಡನು. ಆ ಮನುಷ್ಯನು ಬಹಳ ಬಳಲಿ ಬೇಸತ್ತಿದ್ದನು. ಬಲಶಾಲಿಯಾದ ಅಬ್ರಹಾಮನು ಮನದಲ್ಲಿ ಮರುಗಿ ಆತನ ಕೈಯಲ್ಲಿಯ ಕೊಡಲಿಯನ್ನು ತೆಗೆದುಕೊಂಡು ಕಟ್ಟಿಗೆಗಳನ್ನು ಒಡೆದುಕೊಟ್ಟನು. ಅದರಿಂದ ಆ ಬಡ ಕೂಲಿಕಾರನಿಗೆ ಎರಡುದಿನ ಹೊಟ್ಟೆಗೆ ಸಾಲುವಷ್ಟು ಸಂಬಳವು ದೊರೆಯಿತು.

ಒಂದಾನೊಂದು ದಿವಸ ಹಜರತ ಮಹಮ್ಮದ ಪೈಗಂಬರರು ದಾರಿಯು ಹಿಡಿದು ಹೋಗುತ್ತಿರುವಾಗ ಒಬ್ಬ ತೊತ್ತು ತಲೆಯಮೇಲೆ ಹಿಟ್ಟಿನ ದೊಡ್ಡ ಗಂಟನ್ನು ಹೊತ್ತುಕೊಂಡು ಅಳುತ್ತ ನಡೆದಿರುವುದನ್ನು ಕಂಡರು. ಆಕೆಯು ಒಬ್ಬ ಯಹೂದಿ ಮನುಷ್ಯನ ತೊತ್ತೆಂದೂ, ದೊಡ್ಡಭಾರವನ್ನು ಹೊತ್ತುಕೊಂಡು ಹೋಗುವಾಗ ತಡವಾಗುವುದರಿಂದ ಆ ಯಹೂದಿಯು ಹೊಡೆಯುವನೆಂಬ ಅಂಜಿಕೆಯಿಂದ ಅಳುತ್ತಿರುವಳೆಂದೂ ತಿಳಿಯಲು ಪಯಗಂಬರರು ಅವಳ ಗಂಟನ್ನು ತಮ್ಮ ತಲೆಯಮೇಲೆ ಹೊತ್ತುಕೊಂಡು ಆಕೆಯ ಒಡೆಯನ ಮನೆಯ ತನಕ ಹೋಗಿ ತೊತ್ತಿನ ತಪ್ಪೇನೂ ಇಲ್ಲವೆಂದೂ, ಅವಳು ನಂಬುಗೆಯಿಂದ ಕೆಲಸಮಾಡುವವಳೆಂದೂ ಹೇಳಿದರು. ಯಹೂದಿಯು ಮಹಾತ್ಮರ ಈ ದೊಡ್ಡತನಕ್ಕೆ ಮರುಳಾಗಿ ಅವರ ಶಿಷ್ಯನಾದನು.

---

ಸಹಾನುಭೂತಿ.

## ೬೩. ಟಾಮಸ್‌ಫಿಪ್.

ಕ್ರಿಮಿಯದಲ್ಲಿ ರಶಿಯದವರೊಡನೆ ಯುದ್ಧವು ನಡೆದಾಗ ಹತ್ತೇ ವರುಷ ವಯಸ್ಸಿನ ಟಾಮಸ್‌ಫಿಪ್ ಎಂಬ ಹುಡುಗನು ಗ್ರೇನೇಡಿಯರ್ ಸೈನ್ಯದ ವಾದ್ಯ ವಿಭಾಗದಲ್ಲಿ ಕೊಳಲೂದುವವನಾಗಿದ್ದನು. ಭಯಂಕರವಾದ ಕಾಳಗವು ನಡೆ ದಿರಲು ಗಾಯಹೊಂದಿದ ಒಬ್ಬ ಸೈನಿಕನು ಪಕ್ಕದಲ್ಲಿದ್ದ ಸೈನಿಕರನ್ನು ಕುರಿತು ನೀರಡಿಕೆಯಾದ ಈ ಸಮಯದಲ್ಲಿ ಒಂದು ಬಟ್ಟಲು ಚಹವು ದೊರೆತರೆ ಪ್ರಾಣ ವುಳಿದೀತಲ್ಲ ಎಂದು ಹೇಳುವುದನ್ನು ಫಿಪ್ಪನು ಕೇಳಿದನು. ಸೈನಿಕರ ಹೆಗಲ ಚೀಲದಲ್ಲಿ ಚಹದ ಸೊಪ್ಪು, ನೀರಿನ ಬಾಟಲಿ, ಸಕ್ಕರೆ ಮೊದಲಾದುವು ಇರು ವುವು. ಆ ಹುಡುಗನು ಗುಂಡಿನ ಮಳೆ ಸುರಿಯುತ್ತಿರುವ ಆ ರಣಾಂಗಣದಲ್ಲಿ ಅತ್ತಿತ್ತ ತಿರುಗಾಡಿ ಕೆಲವು ಕಟ್ಟಿಗೆಗಳನ್ನು ಕೂಡಿಸಿ ನೀರು ಕಾಯಿಸಿ ಚಹ ವನ್ನು ಮಾಡಿದನು. ಈ ಅವಧಿಯಲ್ಲಿ ಒಂದು ಗುಂಡು ಆತನ ಟೊಪ್ಪಿಗೆಗೆ ಬಡಿ ಯಿತು; ಇನ್ನೊಂದು ಗುಂಡು ಕೋಟಿನ ತೋಳಿಗೆ ಬಡಿದು ಅಂಗಿಯನ್ನು ಹರಿ ದುಕೊಂಡು ಹೋಯಿತು; ಮತ್ತೊಂದು ಗುಂಡು ಹೆಗಲಿಗೆ ಸ್ವಲ್ಪ ಬಡಿದು ಹೋಯಿತು. ಆದರೆ ಆ ಹುಡುಗನು ಇದನ್ನು ಗಮನಿಸದೆ ಗಾಯಹೊಂದಿದ ತೃಷಿತಸೈನಿಕರಿಗೆ ಚಹವನ್ನೊದಗಿಸಿದನು. ಹಲವರು ಮರಣೋನ್ಮುಖರಾದ ಸೈನಿ ಕರು ಅಂತ್ಯಕಾಲದಲ್ಲಿ ಆ ಚಹವನ್ನು ಕುಡಿದು ಬಾಲಕನನ್ನು ಹರಸಿದರು.

ಸಂಸಾರಯಾತ್ರೆಯಲ್ಲಿ ಮನುಷ್ಯನಿಗೆ ನಾಲ್ವರ ಸಹಾನುಭೂತಿಯು ಅವಶ್ಯ ಕವು. ಸಹಾನುಭೂತಿಯು ಬರಿಯ ಮಾತಿನಲ್ಲಿ ಮುಗಿದರೆ ಅದರಿಂದೇನೂ ಪ್ರಯೋಜನವಿಲ್ಲ. ಅದು ಕಾರ್ಯಕಾರಿಯಾಗಿ ಪರೋಪಕಾರದಲ್ಲಿ ಪರಿಣಮಿಸಿ ದರೆ ಅದರಿಂದ ಫಲವಾಗುವುದು. ಉತ್ಕಟವಾದ ಸಹಾನುಭೂತಿಯಿಂದ ತಮ್ಮ ಪ್ರಾಣವನ್ನೂ ಲೆಕ್ಕಿಸದ ಫಿಪ್ ಬಾಲಕನಂತಹ ಮನುಷ್ಯರು ವಿರಲವಾಗಿದ್ದರೂ ತಮ್ಮ ಅನನುಕೂಲತೆಯನ್ನು ಗಮನಿಸದೆ ಪರೋಪಕಾರಕ್ಕೆ ತೊಡಗುವಂತಹ ಮಧ್ಯಮ ಸಹಾನುಭೂತಿಯ ಜನರನ್ನು ಕಾಣಬಹುದು. ಒಮ್ಮೆ ಚಳಿಗಾಲದಲ್ಲಿ ಈಶ್ವರಚಂದ್ರವಿದ್ಯಾಸಾಗರನ ಮನೆಯ ಬಾಗಿಲಿಗೆ ಒಬ್ಬ ತಿರಿಕಿಯು ಸಂಗಡ ಒಬ್ಬ ಹುಡುಗನನ್ನು ಕರೆದುಕೊಂಡು ಬಂದಳು. ಆ ತಿರಿಕಿಯೂ, ಆ ಹುಡು ಗನೂ ಚಳಿಯಿಂದ ನಡುಗುತ್ತಿದ್ದರು. ತಿರಿಕಿಯು ವಿದ್ಯಾಸಾಗರನ ತಾಯಿಯನ್ನು

ಕುರಿತು ಅಮ್ಮಾ, ಈ ಚಳಿಯಲ್ಲಿ ನನ್ನ ಈ ಮಗುವಿನ ಪ್ರಾಣ ಹೋಗುತ್ತಿದೆ; ದಯೆಮಾಡಿ ಒಂದು ಕಂಬಳಿಯನ್ನು ಕೊಡುವೆಯಾ ಎಂದು ಕೇಳಿದಳು. ಆಕೆಯು ತಾನು ಹೊದೆದುಕೊಳ್ಳುವ ಶಕಲಾತಿಯನ್ನು ಆ ತಿರಿಕಿಗೆ ತಂದುಕೊಟ್ಟುಬಿಟ್ಟಳು. ಈ ಸುದ್ದಿಯನ್ನು ಆಕೆ ಮಗನಿಗೆ ಹೇಳದೆ ಆದಿನ ರಾತ್ರಿಯನ್ನೆಲ್ಲಾ ಮಲಗುವ ಕೋಣೆಯಲ್ಲಿ ಅಗ್ಗಿಷ್ಟಿಗೆಯನ್ನಿಟ್ಟುಕೊಂಡೇ ಕಳೆದಳು. ಮರುದಿನ ಈ ಸಮಾಚಾರವನ್ನು ತಿಳಿದು ವಿದ್ಯಾಸಾಗರನು ತಾಯಿಗೆ ಮತ್ತೊಂದು ಶಕಲಾತಿಯನ್ನು ತಂದುಕೊಟ್ಟನು.

---

ಪ್ರಾಮಾಣಿಕತನ.

## ೬೪. ಮೋರ್ಝುಸ್ ರಾಥಚಾಯಿಲ್ಡ್.

ಕ್ರಿ. ೧೮ನೆಯ ಶತಕದಲ್ಲಿ ಫ್ರಾನ್ಸಕ್ಕೂ ಜರ್ಮನಿಗೂ ಯುದ್ಧವು ನಡೆದಾಗ ಫ್ರೆಂಚರು ಜರ್ಮನಿಯ ಮೇಲೆ ದಾಳಿಯಿಟ್ಟರು. ಆಗ ಜರ್ಮನಿಯೊಳಗಿನ ಹೇಸಿಕ್ಯಾಸಲ್ ಎಂಬ ಸಂಸ್ಥಾನದ ರಾಜನಿಗೆ ದೇಶತ್ಯಾಗಮಾಡಿ ಓಡಿಹೋಗುವ ಹೊತ್ತು ಬಂದಿತು. ಆಗ ಅವನು ತನ್ನ ಸಂಪತ್ತಿಯನ್ನೆಲ್ಲ ಕಟ್ಟಿಕೊಂಡು ನಡೆದಾಗ ಫ್ರಾಂಕ್‌ಫೋರ್ಟ್ ಎಂಬ ಪಟ್ಟಣದಲ್ಲಿ ಮೋರ್ಝುಸ್ ರಾಥಚಾಯಿಲ್ಡ್ ಎಂಬ ಒಬ್ಬ ಹುಂಡಿಯ ಅಂಗಡಿಕಾರನನ್ನು ಕಂಡು, ತಾನು ಮರಳಿ ಬರುವವರೆಗೆ ತನ್ನ ಸಂಪತ್ತಿಯನ್ನೆಲ್ಲ ಇಟುಕೊಳ್ಳಬೇಕೆಂದು ಕೇಳಿದನು. ಅರಸನ ಸಂಪತ್ತಿಯು ಅಪಾರವಾದುದು; ಯುದದ ಸಮಯದಲ್ಲಿ ಆ ಸಂಪತ್ತಿಯನ್ನು ಕಾಯುವದು ಅಸಾಧ್ಯವು. ಆದುದರಿಂದ ಮೋರ್ಝುಸ ರಾಥಚಾಯಿಲ್ಡನು ಒಪ್ಪಲಿಲ್ಲ. ಆದರೂ ಅರಸನು ಆಗ್ರಹಪಡಿಸಿ ತನ್ನ ಬಂಗಾರ ಬೆಳ್ಳಿ ಮುತ್ತು ರತ್ನ ಮೊದಲಾದ ಸಂಪತ್ತಿಯನ್ನೆಲ್ಲ ಮೋರ್ಝುಸನ ಬಳಿಯಲ್ಲಿರಿಸಿ ಮುಂದೆ ಹೊರಟು ಹೋದನು.

ಕೋಟ್ಯವಧಿರೂಪಾಯಿಗಳ ಸಂಪತ್ತಿಯನ್ನು ಮೋರ್ಝುಸನು ಹೊರಗಿಟ್ಟುಕೊಂಡು ಕಾಪಾಡುವುದು ಹೇಗೆ? ಅವನು ಅದನ್ನು ತನ್ನ ತೋಟದೊಳಗಿನ ಒಂದು ಮೂಲೆಯಲ್ಲಿ ಯಾರೂ ಅರಿಯದಂತೆ ಹುಗಿದು ಬಿಟ್ಟನು. ಹಗೆಗಳು ದೋಚಿಕೊಂಡು ಹೋಗಲು ಬಂದರೆ ಸಂಶಯವು ಬರಬಾರದೆಂದು ತನ್ನ ಸಂಪತ್ತಿಯನ್ನು ಅಡಗಿಸಿಡಲಿಲ್ಲ. ಫ್ರೆಂಚರು ಫ್ರಾಂಕ್‌ಫೋರ್ಟ್ ಪಟ್ಟಣವನ್ನು ಪೂರ್ಣವಾಗಿ ದೋಚಿಕೊಂಡರು. ಮೋರ್ಝುಸನು ತನ್ನ ಸಂಪತ್ತಿಯನ್ನೂ ಬಚ್ಚಿಟದರೆ

ಕೊಳ್ಳೆಗಾರರು ಎಲ್ಲವನ್ನೂ ಹೊರಹೊರಡಿಸದೆ ಬಿಡುತ್ತಿರಲಿಲ್ಲ. ಅವನು ಮಾಡಿದ ಉಪಾಯದಿಂದ ಅರಸನ ಸಂಪತ್ತಿಯಾದರೂ ಉಳಿಯಿತು. ಕೊಳ್ಳೆಗಾರರು ಹೊರಟುಹೋದಬಳಿಕ, ಮೋಝುಸನು ಅರಸನ ಸಂಪತ್ತಿಯಲ್ಲಿ ಕೆಲವು ಹಣವನ್ನು ತೆಗೆದುಕೊಂಡು ಅದರಿಂದ ಮತ್ತೆ ವ್ಯಾಪಾರವನ್ನು ನಡೆಯಿಸಿ ತನ್ನ ಮೊದಲಿನ ಸಂಪತ್ತಿಯನ್ನು ಗಳಿಸಿದನು.

ಯುದ್ಧವು ಮುಗಿದಬಳಿಕ ದೇಶದಲ್ಲಿ ಶಾಂತತೆಯುಂಟಾಗಲು ಹೇಸಿಕ್ಯಾಸಲದ ಅರಸನು ತನ್ನ ಸಂಸ್ಥಾನಕ್ಕೆ ಮರಳಿಬಂದನು. ಮೋಝುಸನಲ್ಲಿಟ್ಟ ತನ್ನ ಸಂಪತ್ತಿಯನ್ನು ಶತ್ರುಗಳು ದೋಚಿಕೊಂಡು ಹೋಗಿರಬಹುದೆಂದೂ, ಇಲ್ಲವೆ ಅವರು ದೋಚಿಕೊಂಡು ಹೋಗದಿದ್ದರೂ ಮೋಝುಸನೇ ಶತ್ರುಗಳು ದೋಚಿಕೊಂಡು ಹೋದರೆಂದು ಹೇಳಿ ತನ್ನ ಸಂಪತ್ತಿಯನ್ನು ಮರಳಿ ಕೊಡದಿರಬಹುದೆಂದೂ ತಿಳಿದು ಅತನು ಫ್ರಾಂಕ್‌ಫೋರ್ಟಕ್ಕೆ ಹೋಗುವದು ಅನಾವಶ್ಯಕವೆಂದು ತಿಳಿದಿದ್ದನು. ಆದರೂ ಆ ಅರಸನು ಅಲ್ಲಿಗೆ ಬಂದೊಡನೆ ಮೋಝುಸನೇ ಅತನ ಬಳಿಗೆ ಹೋಗಿ ಎಲ್ಲ ಸಂಪತ್ತಿಯನ್ನು ಒಯ್ಯಬೇಕೆಂದೂ, ತಾನು ಬಳಸಿಕೊಂಡ ಹಣವನ್ನೂ ಅದರ ಬಡ್ಡಿಯನ್ನೂ ಕೂಡ ಒಯ್ಯಬೇಕೆಂದೂ ಬಿನ್ನಯಿಸಿದನು.

ಮೋಝುಸ ರಾಥಚಾಯಿಲ್ಡನ ಈ ಅಲೌಕಿಕ ಪ್ರಾಮಾಣಿಕತನವನ್ನು ಕಂಡು ಅರಸನು ಪರಮಾವಧಿ ಸಂತೋಷ ಹೊಂದಿದನು. ಮತ್ತು ಅತನು ಬಳಸಿಕೊಂಡ ತನ್ನ ಹಣವನ್ನು ಅತನ ಕಡೆಗೇ ಸ್ವಲ್ಪ ಬಡ್ಡಿಗೆ ಇಟ್ಟು ಬಿಟ್ಟನು. ಬಳಿಕ ಯುರೋಪದ ತನ್ನ ಪರಿಚಯದ ಅನೇಕ ರಾಜರ ಬಳಿಯಲ್ಲಿ ಮೋಝುಸನ ಪ್ರಾಮಾಣಿಕತನದ ಪ್ರಶಂಸೆಯ ಪತ್ರಗಳನ್ನು ಕಳುಹಿದನು. ಅವರು ಅವನಿಗೆ ರಾಜಕೀಯಕಾರ್ಯಕ್ಕಾಗಿ ದುಡ್ಡನ್ನು ಕೂಡಿಸುವ ದೊಡ್ಡ ದೊಡ್ಡ ಕೆಲಸಗಳನ್ನು ಒಪ್ಪಿಸಿದರು. ಇದರಿಂದ ಅವನು ಅತಿಶಯ ಲಾಭವನ್ನು ಹೊಂದಿದನು. ಮುಂದೆ ಅವನ ಮಕ್ಕಳು ಲಂಡನ್ ಪಾರಿಸ್ ವ್ಹಿಎನ್ನಾ ಪಟ್ಟಣಗಳಲ್ಲಿ ಪತ್ತುಗಾರಿಕೆಯ ಅಂಗಡಿಗಳನ್ನು ಹಾಕಿ ಅಭಿವೃದ್ಧಿಯನ್ನು ಪಡೆದರು. ಇದರಿಂದ ಮೋಝುಸನ ವಂಶವು ಜಗತ್ತಿನಲ್ಲಿ ಬಹಳ ಪ್ರಾಮಾಣಿಕವೂ, ಸಂಪತ್ತುಳ್ಳದೂ ಎಂದು ಹೆಸರು ಹೊಂದಿತು.

---

ಮುಗ್ಧಭಕ್ತಿ. **೩೫. ಕೋಳೂರ ಕೊಡಗೂಸು ( ಕನ್ಯೆ ).**

ಕರ್ನಾಟಕ ದೇಶದಲ್ಲಿ ಕೋಳೂರೆಂಬುದೊಂದು ಗ್ರಾಮವುಂಟು. ಅಲ್ಲಿ ಪೂರ್ವಕಾಲದಲ್ಲಿ ಶಿವದೇವನೆಂಬ ಒಬ್ಬ ಶಿವಭಕ್ತನಿದ್ದನು. ಆತನಿಗೆ ಒಬ್ಬ ಚಿಕ್ಕ ಮಗಳ ಹೊರತು ಬೇರೆ ಯಾರೂ ಇರಲಿಲ್ಲ. ಶಿವದೇವನು ತನ್ನ ಊರಲ್ಲಿರುವ ಕಲ್ಲಿನಾಥನೆಂಬ ದೇವರಿಗೆ ದಿನಾಲು ಒಂದು ಕೊಳಗ ಹಾಲನ್ನು ಎಡೆ ತೋರಿಸಿ ಬರುವ ನಿಯಮವನ್ನಿಟ್ಟುಕೊಂಡಿದ್ದನು. ಒಂದಾನೊಂದು ದಿವಸ ಶಿವದೇವನು ಅನಿವಾರ್ಯ ಬೇರೂರಿಗೆ ಹೋಗಬೇಕಾದುದರಿಂದ ಮಗಳನ್ನು ಕರೆದು —' ತಂಗೀ ನಾನು ಊರಿಗೆ ಹೋಗಿ ಬರುವವರೆಗೆ ಮನೆಯನ್ನು ಕಾದುಕೊಂಡಿರು; ಇರುಳು ಹಿತ್ತಿಲಲ್ಲಿ ಹೋಗಬೇಡ; ಬೇರೆ ಹುಡುಗರ ಸಂಗಡ ದೂರ ಎಲ್ಲಿಯೂ ತಿರುಗಾಡುತ್ತ ಹೋಗಬೇಡ; ದಿನಾಲು ಆಕಳನ್ನು ಹಿಂಡಿಕೊಂಡು ಕಲ್ಲಿನಾಥನಿಗೆ ಹಾಲನ್ನು ಸಲಿಸಿ ಬರುವ ನನ್ನ ನಿಯಮವನ್ನು ನೀನು ಮರೆಯದೆ ನಡೆಸು. ಮಗಳೇ, ತಿರುಗಿ ಬರುವಾಗ ನಾನು ನಿನಗೆ ಗೊಂಬೆಯನ್ನೂ ಆಟಿಗೆಗಳನ್ನೂ ತಂದುಕೊಡುವೆನು; ಮನೆಯ ಕಡೆಗೆ ಜೋಕೆ ' ಎಂದು ಹೇಳಿ ಹೊರಟುಹೋದನು.

ಮರುದಿನ ಆ ಹುಡಿಗೆ ಗುಡಿಗೆ ಹೋಗಿ ಕಲ್ಲಿನಾಥನಿದಿರಿಗೆ ಹಾಲಿನ ಕೊಳಗವನ್ನಿಟ್ಟು–' ದೇವಾ, ಹಸಿದಿರುವೆ; ಬೇಗನೆ ಹಾಲನ್ನು ಕುಡಿ ' ಎಂದು ಹೇಳಿ ಕಂಬದ ಮರೆಗೆ ನಿಂತುಕೊಂಡಳು. ದೇವರಿದಿರಿಗೆ ಎಡೆಯಿಟ್ಟು ತಿರುಗಿ ಮನೆಗೆ ಒಯ್ಯುವ ಭಕ್ತಿಯನ್ನು ಆ ಹುಡಿಗೆ ಅರಿಯಳು. ದೇವರು ಹಾಲನ್ನು ಕುಡಿಯುವನೆಂದು ಆಕೆ ತಿಳಿದಿದ್ದಳು. ಎಷ್ಟು ಹೊತ್ತಾದರೂ ದೇವರು ಹಾಲನ್ನು ಕುಡಿಯದಿರುವುದನ್ನು ಕಂಡು, ತನ್ನ ತಂದೆಯು ಅರ್ಪಿಸಿದರೆ ಹಾಲನ್ನು ಕುಡಿಯುವ ದೇವರು ನಾನು ಅರ್ಪಿಸಿದರೆ ಏಕೆ ಕುಡಿಯಲೊಲ್ಲನೆಂದು ಬಾಲೆ ಭಯಗೊಂಡಳು. ಆಗ ಹುಡಿಗೆ—' ದೇವಾ, ನಿನಗೆ ಹಸಿವೆಯಾಗಿಲ್ಲವೊ? ಹಾಲು ಆರಿದುದೆಂದು ಒಲ್ಲೆಯಾ? ಕೆನೆದೆಗೆದು ತಂದಿರುವೆನೆಂದು ತಿಳಿದೆಯಾ? ಸಕ್ಕರೆ ಬೆರಸಿಲ್ಲವೆಂದು ಬಗೆದೆಯಾ? ಬೇಗನೆ ಕುಡಿ ನೀನು ಬೇಡಿದುದನ್ನು ಕೊಡುವೆನು; ಬರಿಯ ಹಾಲನ್ನು ಕುಡಿಯಲಾರೆಯಾದರೆ ಸಂಗಡ ತಿನ್ನುವುದಕ್ಕೆ ಕರಿಗಡಬು, ಕರಂಜಿಕಾಯಿಗಳನ್ನು ತಂದುಕೊಡಲಿಯಾ? ಹೇಳು ಈಗಲೇ ತಂದುಕೊಡುವೆನು;

ನಾನು ಹೇಳುವುದನ್ನು ಕೇಳು, ತಟ್ಟನೆ ನೀನು ಹಾಲನ್ನು ಕುಡಿದುಬಿಟ್ಟರೆ ನಾಳೆ ಆಗುವ ವೀರಭದ್ರದೇವರ ತೇರಿಗೆ ನಿನ್ನನ್ನು ಕರೆದೊಯ್ಯುವೆನು; ನಮ್ಮಪ್ಪನು ನನಗೆ ತಂದುಕೊಡುವ ಆಟಿಗೆಗಳನ್ನೆಲ್ಲ ನೀನೇ ಬೇಕಾದರೆ ತೆಗೆದುಕೊಳ್ಳು; ಹೇಗಾದರೂ ಮಾಡಿ, ಹುಡಿಗೆ ಹಾಲು ತಂದಳೆಂದು ಸಿಟ್ಟಾಗದೆ ಬೇಗನೆ ಕುಡಿ' ಎಂದು ಬೇಕಾದಷ್ಟು ರಂಬಿಸಿ ಕೇಳಿದಳು. 'ನೀನು ಹಾಲನ್ನು ಕುಡಿಯದಿದ್ದರೆ ನಾನು ಊಟವನ್ನೇ ಮಾಡುವದಿಲ್ಲ' ಎಂದು ಅಂಜಿಸಿ ನೋಡಿದಳು. ಏನಾದರೂ ಕಲ್ಲಿನಾಥನು ಕಲ್ಲಾಗಿರುವುದನ್ನು ಕಂಡು ಹುಡಿಗೆ ಕಳವಳಪಟ್ಟು ನಿರಾಶಳಾಗಿ– 'ಶಂಕರಾ, ನೀನು ಇಷ್ಟೇಕೆ ಚಂಡಿತನವನ್ನು ಮಾಡುತ್ತೀಯೋ ಅರಿಯೆನು; ನೀನು ಹಾಲನ್ನು ಕುಡಿಯದೆ ಹೋದರೆ ನಿನ್ನಿದಿರಿಗೆ ಈಗಲೇ ತಲೆಯೊಡೆದುಕೊಂಡು ಸತ್ತುಹೋಗುತ್ತೇನೆ' ಎಂದು ಕಲ್ಲಿನ ಕಂಬಕ್ಕೆ ತಲೆಯನ್ನು ಅಪ್ಪಳಿಸತೊಡಗಲು ಭಕ್ತವತ್ಸಲನಾದ ಪರಮೇಶ್ವರನು ಬಾಲೆಯ ಮುಗ್ಧಭಕ್ತಿಗೆ ಮರುಳಾಗಿ ಮೈದೋರಿ ಹಾಲನ್ನು ಕುಡಿಯತೊಡಗಿದನು. ಆಗ ಹುಡಿಗೆ—'ಅಯ್ಯಾ, ಹುಡಿಗೆಯೆಂದು ಇಷ್ಟು ಕಾಡಬೇಕೇ? ನಿನ್ನ ಈ ಹುಡುಗಾಟಿಕೆಯನ್ನು ಅಪ್ಪನು ಬಂದಮೇಲೆ ಹೇಳಿಬಿಡುವೆನು; ನೋಡು; ನಾಳೆ ಹೀಗೆ ಮಾಡಿದರೆ ಕೇಳಲಾರೆನು' ಎಂದು ಗದರಿಸಿ ಮನೆಗೆ ಬಂದಳು. ಹೀಗೆ ಬಾಲೆಯು ಹಾಲನ್ನು ಪರಮೇಶ್ವರನಿಗೆ ಕುಡಿಸುತ್ತಿರಲು ಒಂದು ದಿವಸ ಆಕೆಯ ತಂದೆಯು ಬೇರೂರಿಂದ ಮರಳಿ ಬರುವಾಗ ದಾರಿಯಲ್ಲಿ ತನ್ನ ಮಗಳು ಬರಿಯ ಕೊಳಗವನ್ನು ಹಿಡಿದುಕೊಂಡು ಮನೆಗೆ ನಡೆದಿರುವುದನ್ನು ಕಂಡು ಬೇಗನೆ ಬಳಿಗೆ ಬಂದು—'ಹಾಲನ್ನೇನು ಮಾಡಿದೆ? ನೀನೇ ಗುಡಿಯಲ್ಲಿ ಕುಡಿಯುತ್ತಿರುವೆಯಾ' ಎಂದು ಗದರಿಸಿದನು. ಬಾಲೆಯು—'ಶಿವನಿಗೇ ಕುಡಿಸುತ್ತೇನೆ; ಬೇಕಾದರೆ ನಾಳೆ ನೋಡು' ಎಂದು ಹೇಳಿದಳು. ತಂದೆಯು ಸಿಟ್ಟಾಗಿ ಮಗಳ ಸುಳ್ಳುತನಕ್ಕೆ ಚೆನ್ನಾಗಿ ಪ್ರಾಯಶ್ಚಿತ್ತಮಾಡಬೇಕೆಂದು ಆಲೋಚಿಸಿ ಮರು ದಿವಸ ಅವಳೊಡನೆ ದೇವಾಲಯಕ್ಕೆ ಬಂದನು. ದೇವರು ಕೂಸಿನ ಮಹತ್ತ್ವವನ್ನು ಪ್ರಕಟಿಸಬೇಕೆಂದು ಈ ದಿವಸ ಮತ್ತೆ ಕುಡಿಯದೆ ಕಲ್ಲಾಗಿ ಕುಳಿತನು. ಆಗ ಶಿವದೇವನು—'ಎಲೆ ಮಾಟಗಾತಿಯೇ ಇಷ್ಟು ಚಿಕ್ಕತನದಲ್ಲಿಯೇ ಇಷ್ಟು ಮೋಸವನ್ನು ಕಲಿತೆಯಾ? ದಿನಾಲು ಹಾಲನ್ನು ಕುಡಿದು ಸವಿಗಂಡೆಯಾ? ನಿನ್ನನ್ನು ಈಗಲೇ ಕಡಿದಿಕ್ಕುವೆನು' ಎಂದು ಕೋಪಾಂಧನಾಗಿ ಮೈಮೇಲೆ ಹೋಗಲು ಹುಡಿಗೆ—'ದೇವರೇ ದಿನದಂತೆ ಏಕೆ ಕುಡಿಯದಿರುವೆ? ಹೀಗೆ

ಚೇಷ್ಟೆಮಾಡಿ ನನ್ನನ್ನು ಕೊಲ್ಲಿಸುವೆಯಾ, ನಿನಗೆ ನಾನು ಬೇಡವಾದೆನೇ' ಎಂದು ಮೊರೆಯಿಡಲು ಪರಮೇಶ್ವರನು-' ಮಗಳೇ, ಅಂಜಬೇಡ; ಇದು ನೋಡು ಕುಡಿಯುವೆನು' ಎಂದು ಹಾಲನ್ನು ಕುಡಿದು ' ತಂಗೀ, ನಿನಗೆ ಇಲ್ಲಿ ನಿರ್ಭಯವಾದ ಸ್ಥಳವುಂಟು, ಬಾ' ಎಂದು ತೋಳುಗಳಿಂದ ಅಪ್ಪಿಕೊಂಡು ತನ್ನೊಳಗೆ ಅಡಗಿಸಿಕೊಳ್ಳತೊಡಗಿದನು. ಆಗಲಾ ತಂದೆಯು ಎದೆಗರಗಿ ' ಮಗಳೇ, ಪಾಪಿಯಾದ ನನ್ನನ್ನು ತೊರೆದು ಹೋಗಬೇಡ' ಎಂದು ಲಿಂಗದೊಡಲನು ಸೇರುವ ಮಗಳ ಜಡೆಯನ್ನು ಹಿಡಿದಿರಲು ಜಡೆಯು ಹೊರತು ದೇಹವೆಲ್ಲ ಲಿಂಗದೊಳಗೆ ಅಡಗಿಹೋಯಿತು.! ಪ್ರಹ್ಲಾದ, ಧ್ರುವರ ಬಾಲಭಕ್ತಿಗೆ ಮೆಚ್ಚಿ ಪರಮಪದವನ್ನಿತ್ತ ಪರಮೇಶ್ವರನು ಕೋಳೂರ ಕೊಡಗೂಸಿಗೂ ಕೈವಲ್ಯವನ್ನಿತ್ತನು.

---

## ೬೬. ರಸಿಯದ ಅಧಿಕಾರಿ.

ಕರ್ತವ್ಯದಲ್ಲಿ ಏಕನಿಷ್ಠೆ.

'ಕ್ರಿಮಿಯನ್‌ವಾರ್' ಎಂಬ ಯುದ್ಧದಲ್ಲಿ ಒಂದೇ ರಸಿಯಾದೇಶವು ತುರ್ಕಸ್ತಾನ, ಇಂಗ್ಲಂಡ್, ಫ್ರಾನ್ಸ್, ಸಾರ್ಡಿನಿಯಾ ಇವುಗಳೊಡನೆ ಹೋರಾಡುವಾಗ ಮುತ್ತಿಗೆ ಹಾಕಿದ ಸಿವಾಸ್ಟಪೋಲ್ ಎಂಬ ಕೋಟೆಯಿಂದ ರಸಿಯದ ಚಕ್ರವರ್ತಿಯಾದ ನಿಕೋಲಸನ ಬಳಿಗೆ ಒಂದು ಮಹತ್ವದ ಸುದ್ದಿಯನ್ನು ಕಳುಹಬೇಕಾಯಿತು. ರಸಿಯದ ಸೇನಾಪತಿಯು ಒಳ್ಳೆಯ ಮನೆತನದ ಒಬ್ಬ ಅಧಿಕಾರಿಯ ಕೈಯಲ್ಲಿ ಮೊಹರುಮಾಡಿದ ಒಂದು ಲಖೋಟೆಯನ್ನು ಕೊಟ್ಟು-' ಇದನ್ನು ಚಕ್ರವರ್ತಿಯ ಕೈಯಲ್ಲಿಯೇ ಕೊಡಬೇಕು, ಹಗಲೂ ಇರುಳೂ ಎಲ್ಲಿಯೂ ವಿಶ್ರಾಂತಿಯಿಲ್ಲದೆ ಹೋಗಬೇಕು' ಎಂದು ಹೇಳಿದನು.

ದಾರಿಯಲ್ಲಿ ಹತ್ತು ಮೈಲಿಗೊಮ್ಮೆ ಹೊಸ ಕುದುರೆಯು ದೊರೆಯುವಂತೆ ಯೋಜನೆಯಿತ್ತು. ಕುದುರೆಯನ್ನು ಪರಮಾವಧಿವೇಗದಿಂದ ಓಡಿಸುತ್ತ ಆ ಅಧಿಕಾರಿಯು ' ಸ್ಲೇಜ್' ಬಂಡಿಯ ಮೇಲೆ ಹಗಲಿರುಳು ಒಂದೇಸವನೆ ಪ್ರಯಾಣ ಮಾಡುತ್ತ ನಡೆದನು. ಪ್ರತಿಬಂದು ' ಟಪ್ಪೆ 'ಯಲ್ಲಿ ಒಂದೆರಡು ಮಿನಿಟುಗಳಲ್ಲಿಯೇ ಅಲ್ಲಿಯ ಕಾವಲುಗಾರನು ' ಬಂಡಿಯು ಸಿದ್ಧವಾಗಿದೆ' ಎಂದು ಹೇಳುವನು; ಅಧಿಕಾರಿಯು ಕೂಡಲೆ ಬಂಡಿಯನ್ನೇರಿ ' ಕುದುರೆಯನ್ನೋಡಿಸು' ಎಂದು ಸಾರಥಿಗೆ ಅಪ್ಪಣೆಮಾಡುವನು. ಕೆಲವು ದಿವಸ ಈ ಮೇರೆಗೆ ಪ್ರಯಾಣವಾಡಿ ಆ

ಅಧಿಕಾರಿಯು ಸೆಂಟಪೀಟರ್ಸಬರ್ಗದ ಅರಮನೆಯನ್ನು ಮುಟ್ಟಿ ಚಕ್ರವರ್ತಿಯ ಕೈಯಲ್ಲಿ ಆ ಪತ್ರವನ್ನು ಕೊಟ್ಟನು. ಕೊಟ್ಟುದೊಂದೇ ತಡ; ಕೂಡಲೆ ಆತನು ತಲೆ ತಿರುಗಿದಂತಾಗಲು ಸಮೀಪದಲ್ಲಿದ್ದ ಒಂದು ಕುರ್ಚಿಯ ಮೇಲೆ ಮೂರ್ಛಿತನಾದವನಂತೆ ಒರಗಿಬಿಟ್ಟನು. ಚಕ್ರವರ್ತಿಯು ಪತ್ರವನ್ನೋದುವುದಾದ ಬಳಿಕ ಕಣ್ಣು ಮುಚ್ಚಿಕೊಂಡು ಮಲಗಿದವನಂತೆ ಕಾಣಿಸುತ್ತಿದ್ದ ಆ ಅಧಿಕಾರಿಯನ್ನು ಎಷ್ಟು ಕೂಗಿಯೂ ಎಬ್ಬಿಸಲಾರದೆ ತನ್ನ ಸೇವಕರಿಗೆ ಎಬ್ಬಿಸಹೇಳಿದನು. ಸೇವಕರು ಬೇಕಾದಷ್ಟು ಕೂಗಿದರು, ಹೊರಳಿಸಿ ನೋಡಿದರು ಏನಾದರೂ ಏಳುವ ಲಕ್ಷಣವು ಕಾಣದಿರಲು ಆತನು ಸತ್ತನೆಂದು ಅವರು ಹೇಳಿದರು. ಆದರೆ ಚಕ್ರವರ್ತಿಯು ನಾಡಿಯನ್ನು ಹಿಡಿದು ನೋಡಿ, ಮೂಗಿನ ಮುಂದೆ ಕೈಹಿಡಿದು ನೋಡಿ ಸತ್ತಿಲ್ಲವೆಂದು ಮನಗಂಡನು. ಆಗ ಆತನ ಕಿವಿಯ ಬಳಿಗೆ ತನ್ನ ಮೋರೆಯನ್ನೊಯ್ದು 'ಬಂಡಿಯು ಸಿದ್ಧವಾಗಿದೆ' ಎಂದು ಒದರಿ ಹೇಳಿದನು. ಕೂಡಲೆ ಆ ಅಧಿಕಾರಿಯು ಲಖೋಟೆಯನ್ನಿಡುತ್ತಿದ್ದ ಕೀಸೆಯನ್ನು ಕೈಯಿಂದ ಒತ್ತಿ ಹಿಡಿದು ಎದ್ದು ಕುಳಿತು—'ವೇಗವಾಗಿ ಕುದುರೆಯನ್ನೋಡಿಸು' ಎಂದು ಹೇಳಿದನು. ಆದರೆ ಕಣ್ತೊರೆಸಿಕೊಂಡು ನೋಡುತ್ತಾನೆ—ಇದಿರಿಗೆ ಬಂಡಿಯೂ ಇಲ್ಲ; ಸಾರಥಿಯೂ ಇಲ್ಲ. ಅರಮನೆಯಲ್ಲಿ ಮುಗುಳ್ನಗೆಯಿಂದ ನೋಡುತ್ತ ನಿಂತುಕೊಂಡಿರುವ ಚಕ್ರವರ್ತಿಯ ಇದಿರಿಗೆ ತಾನು ಕುರ್ಚಿಯ ಮೇಲೆ ಕುಳಿತುಕೊಂಡಿರುತ್ತಾನೆ! ಆಗ ನಾಚಿ, ಕಕ್ಕಾವಿಕ್ಕಿಯಾಗಿ ಗಾಬರಿಗೊಂಡು ಎದ್ದು ನಿಂತನು. ಚಕ್ರವರ್ತಿಯು ಆದರದಿಂದ ಆ ಅಧಿಕಾರಿಯ ಕೈಹಿಡಿದು—'ಜನ್ಮಭೂಮಿಯ ಮತ್ತು ಚಕ್ರವರ್ತಿಯ ಕಾರ್ಯಕ್ಕಾಗಿ ಈ ತರದ ಏಕನಿಷ್ಠೆಯೂ ದಾರ್ಢ್ಯವೂ ರಸಿಯದ ಅಧಿಕಾರಿಗಳ ರಕ್ತದಲ್ಲಿ ಭೇದಿಸಿರುವವರೆಗೆ ರಸಿಯದ ಗೌರವವನ್ನು ಯಾರೂ ಕಡಿಮೆಮಾಡಲಾರರು,' ಎಂದು ಹೇಳಿ ಆತನನ್ನು ಸತ್ಕರಿಸಿದನು.

---

## ೬೭. ಹರಿದಾಸನ ಹಾಡು.

ತನ್ಮಯತ್ವವು ಉತ್ಕರ್ಷದ ಉಪಾಯವು.

ಒಂದಾನೊಂದು ದಿವಸ ಅಕಬರಬಾದಶಹನು ಗಾಯಕಶ್ರೇಷ್ಠನಾದ ತಾನಸೇನನು ದೇವರ ಮೇಲೆ ಹಾಡುತ್ತಿರುವ ಪದವನ್ನು ಕೇಳಿ ಬಹಳ ಸಂತೋಷಗೊಂಡು—'ನೀನು ಈ ತರದ ಗಾಯನವನ್ನು ಯಾರ ಬಳಿಯಲ್ಲಿ ಕಲಿತಿರುವೆ'

ಎಂದು ಕೇಳಿದನು. ತಾನಸೇನನು—'ನಾನು ಮೊದಲು ಗಾಯನನಿಷ್ಣಾತರಾದ ಹಲವು ಜನ ಪ್ರಸಿದ್ಧ ಗಾಯಕರ ಬಳಿಯಲ್ಲಿ ಬಹುಕಾಲ ಕಲಿತೆನು; ಕೊನೆಗೆ ಹರಿದಾಸನೆಂಬ ದೇವಭಕ್ತನ ಬಳಿಯಲ್ಲಿ ಸೇವೆಮಾಡಿಕೊಂಡು ಹಲವು ವರ್ಷ ಇದ್ದು ಭಾವದ ಜೋಡಣೆಯುಳ್ಳ ಗಾಯನವೆಂದರೇನೆಂಬುದನ್ನು ಕಲಿತು ಕೊಂಡೆನು' ಎಂದು ಹೇಳಿದನು. ಆಗ ಅಕಬರ ಬಾದಶಹನು—'ನಿನ್ನ ಗುರುವಿನ ಗಾಯನವನ್ನು ನಾನು ಒಮ್ಮೆ ಕೇಳಬೇಕಾಗಿದೆ; ಆತನು ತನ್ನ ಆಶ್ರಮವನ್ನು ಬಿಟ್ಟು ಹೊರಗೆ ಬಾರದಿದ್ದರೆ ನಾನೇ ಅಲ್ಲಿಗೆ ಬರುವೆನು' ಎಂದು ಹೇಳಿದನು. ತಾನಸೇನನು ಒಂದು ದಿವಸ ಬಾದಶಹನನ್ನು ಗುರುವಿನ ಆಶ್ರಮಕ್ಕೆ ಕರೆದೊಯ್ದು ಗುರುವಿಗೆ ನಮಸ್ಕಾರಮಾಡಿ ತನ್ನ ಮರೆಗೆ ಬಾದಶಹನನ್ನು ಕುಳ್ಳಿರಿಸಿಕೊಂಡು ಕುಳಿತು, ಮೊದಲು ತಾನೇ ದೇವರ ಮೇಲಿನ ಒಂದು ಪದವನ್ನು ಆರಂಭಿಸಿದನು. ತನಗೆ ಶಕ್ಯವಿದ್ದಮಟ್ಟಿಗೆ ಉತ್ಕೃಷ್ಟರೀತಿಯಿಂದ ಆಲಾಪಮಾಡಿ ಹಾಡತೊಡಗಿ ದನು. ಗುರುವಾದ ಹರಿದಾಸನೂ ಅದೇ ಹಾಡನ್ನು ಹಿಡಿದು ಮೆಲ್ಲನೆ ಹಾಡುವ ದಕ್ಕಾರಂಭಿಸಿ ಕ್ರಮದಿಂದ ಬಹುಭರದಿಂದ ಹಾಡಲಾರಂಭಿಸಿದನು. ಆ ಗಾಯನ ವನ್ನು ಕೇಳಿ ಬಾದಶಹನು ಮರುಳಾಗಿ ಹೋದನು. ಹರಿದಾಸನ ಗುಡಿಸಲಿನಿಂದ ಮರಳಿ ಬಂದ ಬಳಿಕ ಬಾದಶಹನು ಮತ್ತೊಮ್ಮೆ ಅದೇ ಹಾಡನ್ನು ಕೇಳಬೇಕೆಂಬ ತನ್ನ ಇಚ್ಛೆಯನ್ನು ತೋರಿಸಲು, ತಾನಸೇನನು ಮತ್ತೆ ಆ ಹಾಡನ್ನೇ ಹಾಡಿದನು. ಆದರೆ ಬಾದಶಹನು ನಿನ್ನ ಗುರುವಿನ ಗಾಯನದಷ್ಟು ಸ್ವಾರಸ್ಯವು ಇದರಲ್ಲಿ ಏಕೆ ಬರಲಿಲ್ಲವೆಂದು ಕೇಳಿದನು. ಆಗ ತಾನಸೇನನು—'ಪ್ರಭುಗಳೇ, ನಾನು ಹಾಡು ವಾಗ ದಿಲ್ಲೀಶ್ವರನ ಇದಿರಿಗೆ ಹಾಡುತ್ತಿರುವೆನೆಂಬುದನ್ನು ಮರೆತಿರುವುದಿಲ್ಲ. ಆದರೆ ಗುರುವಿಗೆ ತ್ರಿಭುವನೇಶ್ವರನ ಹೊರತು ಯಾರ ವಿಚಾರವೂ ಇರಲಿಲ್ಲ' ಎಂದು ಹೇಳಿದನು.

---

ಅಸಾಧಾರಣ ಸಾಹಸ.

## ೬೮. ಒಬ್ಬ ಬಯಲಾಳು.

ಒಂದಾನೊಂದು ಕಾಲದಲ್ಲಿ ಇಟಲಿದೇಶದ ಅಡಿಜ್ ಎಂಬ ನದಿಗೆ ಎಂದೂ ಬಾರದಂತಹ ಮಹಾಪೂರವು ಬಂದುದರಿಂದ ವ್ಹೆರೋನಾ ಪಟ್ಟಣದ ಬಳಿಯಲ್ಲಿದ್ದ ಆ ನದಿಯ ಸೇತುವೆಯ ಎರಡೂ ಕಡೆಗಳು ಕೊಚ್ಚಿಕೊಂಡು ಹೋಗತೊಡಗಿ ದುವು. ಈ ಸೇತುವೆಯ ಮೇಲೆ ನಡುವೆ ಒಂದು ಸಣ್ಣ ಗುಡಿಸಲಲ್ಲಿ ಸುಂಕವನ್ನು

ಎತ್ತುವ ಒಬ್ಬ ಮನುಷ್ಯನು ತನ್ನ ಕುಟುಂಬದೊಡನೆ ವಾಸಮಾಡುತ್ತಿದ್ದನು. ಮಹಾಪೂರವು ಅಕಸ್ಮಾತ್ತಾಗಿ ಬಂದುದರಿಂದ ಆ ಸುಂಕಿಗನಿಗೆ ಬೇರೆ ಕಡೆಗೆ ಹೋಗಲು ಅಸ್ಪದವಾಗಿರಲಿಲ್ಲ. ಕ್ಷಣಕ್ಷಣಕ್ಕೆ ಸೇತುವೆಯ ಕಲ್ಲುಗಳು ಬಿದು ತೇಲಿಹೋಗುತ್ತಿರುವುದನ್ನು ನೋಡಿದರೆ, ಇನ್ನು ಸ್ವಲ್ಪ ವೇಳೆಯಲ್ಲಿ ಆ ಸುಂಕದ ಕಟ್ಟೆಯೂ ಆ ಸುಂಕಿಗನೂ ಅತನ ಪರಿವಾರವೂ ಹೊಳೆಯ ಪಾಲಾಗುವರೆಂದು ತೋರಹತ್ತಿತು. ದಂಡೆಯ ಮೇಲೆ ನೋಡುತ್ತ ನಿಂತವರಲ್ಲೊಬ್ಬನು ಈ ಸುಂಕದ ಕಟ್ಟೆಯ ಜನರನ್ನು ಯಾರಾದರೂ ಈ ಸಂಕಟದಿಂದ ಪಾರುಮಾಡಿದರೆ ಅವರಿಗೆ ಐದುನೂರು ರೂಪಾಯಿಗಳ ಬಹುಮಾನವನ್ನು ಕೊಡುವೆನೆಂದು ಸಾರಿ ಹೇಳಿ ದನು. ಆ ಎಡರಿನಲ್ಲಿ ಹೋಗಲು ಯಾರೂ ಮುಂದುವರಿಯಲೊಲ್ಲರು. ಕೆಲವು ಹೊತ್ತಾದ ಬಳಿಕ ಒಬ್ಬ ಬಡವನು ಒಂದು ಸಣ್ಣ ನಾವೆಯನ್ನೇರಿ ಈ ಸಂಕಟ ವನ್ನು ಲೆಕ್ಕಿಸದೆ ಮುಂದುವರಿದು ಸುಂಕದ ಕಟ್ಟೆಯ ಕಡೆಗೆ ಸಾಗಿದನು. ಸುಂಕಿ ಗನೂ, ಅತನ ಮನೆಯವರೂ ಈ ನಾವಿಕನು ಜೀಸಿದ ಹಗ್ಗವನ್ನು ಹಿಡಿದು ಮೆಲ್ಲನೆ ಒಬ್ಬೊಬ್ಬರೇ ಆ ನಾವೆಯ ಮೇಲೆ ಬಂದರು. ಪರಮೇಶ್ವರನ ಕೃಪೆಯಿಂದ ಎಲ್ಲರೂ ದಂಡೆಗೆ ಬಂದರು. ಅಷ್ಟರಲ್ಲಿಯೇ ಆ ಸೇತುವೆಯೂ, ಸುಂಕಿಗನ ಗುಡಿ ಸಲೂ ತೇಲಿ ಹೋದುವು. ಬಹುಮಾನವನ್ನು ಕೊಡಲೊಪ್ಪಿದ ಹಣವನ್ನು ಧನಿ ಕನು ಆದರದಿಂದ ಆ ಬಡವನಿಗೆ ಕೊಡಹೋದನು. ಬಡವನು ಆ ಹಣವನ್ನು ಹಿಡಿಯಲಿಲ್ಲ; ಮತ್ತು ಆ ಧನಿಕನನ್ನು ಕುರಿತು—'ಸ್ವಾಮೀ, ಹಣದಾಸೆಯಿಂದ ಈ ಸಂಕಟದಲ್ಲಿ ಬೀಳಲು ಯಾರೂ ಒಪ್ಪಲಿಲ್ಲವೆಂಬುದನ್ನು ನೀವು ನೋಡಿಯೇ ಇರುವಿರಿ. ನಾನು ಹೋದುದಾದರೂ ದುಡ್ಡಿಗಾಗಿ ಅಲ್ಲ; ಮನಸ್ಸಿನಲ್ಲಿ ಹುಟ್ಟಿದ ಕನಿಕರಕ್ಕಾಗಿ, ಎಂದು ಹೇಳಿದನು.

---

ಮೋಸಗಾರಿಕೆಯಿಂದಾಗುವ ಹಾನಿ.

## ೬೯. ನಾಬೇರನೂ, ಕಳ್ಳನೂ.

ನಾಬೇರ ಎಂಬ ಒಬ್ಬ ಅರಬನ ಬಳಿಯಲ್ಲಿ ಒಂದು ಉತ್ತಮಜಾತಿಯ ಕುದುರೆಯಿತ್ತು. ದಾಹೇರನೆಂಬ ಇನ್ನೊಬ್ಬ ಅರಬನು ಆ ಕುದುರೆಯನ್ನು ಕೊಂಡುಕೊಳ್ಳಬೇಕೆಂದು ಹಲವು ಒಂಟೆಗಳನ್ನು ಬೆಲೆಯಾಗಿ ಕೊಡುತ್ತೇನೆ, ನಿನ್ನ ಕುದುರೆಯನ್ನು ಕೊಡು ಎಂದು ನಾಬೇರನನ್ನು ಹಲವುಪರಿಯಿಂದ ಕೇಳಿದನು.

ಆದರೆ ನಾಬೇರನು ತನ್ನ ಪ್ರೀತಿಯ ಕುದುರೆಯನ್ನು ಮಾರಲೊಪ್ಪಲಿಲ್ಲ. ದಾಹೇರನಿಗೆ ಆ ಕುದುರೆಯನ್ನು ದೊರಕಿಸಬೇಕೆಂಬ ಮೋಹವು ಹೆಚ್ಚಿತು. ಆಗ ದಾಹೇರನು ಒಂದುಪಾಯವನ್ನು ಯೋಚಿಸಿದನು. ಮೋರೆಗೆ ಎಲೆಗಳ ರಸವನ್ನು ಬಳಿದುಕೊಂಡು, ಬಟ್ಟೆಗಳನ್ನು ಬದಲಿಸಿಕೊಂಡು ಕೂದಲುಗಳನ್ನು ಬೆಳ್ಳಗೆಮಾಡಿಕೊಂಡು ಇನ್ನೂ ಹಲವು ಹಂಚಿಕೆಗಳಿಂದ ತನ್ನ ರೂಪವನ್ನು ಮರೆಮಾಚಿಕೊಂಡು ಊರಿಂದ ದೂರದಲ್ಲಿ ದಾರಿಯ ಮಗ್ಗುಲಲ್ಲಿ ನರಳುತ್ತ ಬಿದ್ದುಕೊಂಡನು. ನಾಬೇರನು ತನ್ನ ಕುದುರೆಯನ್ನೇರಿ ಅದೇ ದಾರಿಯ ಹಿಡಿದು ಹೋಗುವಾಗ ಈ ನರಳುತ್ತ ಬಿದ್ದಿರುವ ಮುದುಕನನ್ನು ಕಂಡು ಕನಿಕರಬಟ್ಟು-'ಅಯ್ಯಾ, ನೀನು ಎಲ್ಲಿಗೆ ಹೋಗುವವನು' ಎಂದು ಕೇಳಿದನು. ದಾಹೇರನು-'ಮುಂದಿನ ಊರಿಗೆ' ಎಂದು ಕೈಮಾಡಿ ತೋರಿಸಿದನು. ನಾಬೇರನು ಕುದುರೆಯಿಂದಿಳಿದು ಆ ಮುದುಕನನ್ನು ಅದರಮೇಲೆ ಕುಳ್ಳಿರಿಸಿ ತಾನು ಕುದುರೆಯ ಹಿಂದೆ ನಡೆದನು. ಸ್ವಲ್ಪ ಮುಂದೆ ಹೋದೊಡನೆ ದಾಹೇರನು ಒಮ್ಮೆಲೆ ಕುದುರೆಯನ್ನು ಬಹುವೇಗದಿಂದ ಓಡಿಸಿದನು. ಕೆಲವು ದೂರ ಹೋದಬಳಿಕ ದಾಹೇರನು—'ನೀನು ಏನು ಹೇಳಿದರೂ ಕುದುರೆಯನ್ನು ಕೊಡಲಿಲ್ಲವಾದುದರಿಂದ ಈ ಉಪಾಯವನ್ನು ಮಾಡಬೇಕಾಯಿತು. ಈಗ ಕುದುರೆಯನ್ನೋಡಿಸಿಕೊಂಡು ಹೋಗುತ್ತೇನೆ' ಎಂದು ನಾಬೇರನಿಗೆ ಹೇಳಿದನು. ಆಗ ನಾಬೇರನು ದಾಹೇರನನ್ನು ಕೂಗಿ-'ಅಯ್ಯಾ' ದೇವರ ಮನಸ್ಸಿಗೆ ಬಂದುದರಿಂದ ನೀನು ನನ್ನ ಪ್ರೀತಿಯ ಕುದುರೆಯನ್ನು ಅಪಹರಿಸಿ ಒಯ್ಯುತ್ತಿರುವೆ; ಆದರೆ ಅದನ್ನು ಪ್ರಿತಿಯಿಂದ ಸಲಹು; ಮತ್ತು ನನ್ನ ಇನ್ನೊಂದು ಮಾತನ್ನು ನಡೆಸು. ಈ ಕುದುರೆಯನ್ನು ಸಂಪಾದಿಸಿದ ಬಗೆಯನ್ನು ಯಾರ ಮುಂದೆಯೂ ಹೇಳಬೇಡ. ಏಕೆಂದರೆ, ಜನರು ವಿಪತ್ತಿನಲ್ಲಿರುವವರಿಗೆ ಸಹಾಯಮಾಡುವಲ್ಲಿ ಹಿಂದುಮುಂದೆ ನೋಡಬಹುದು. ಅದರಿಂದ ಆ ದುಃಖಿತರ ದುಃಖವನ್ನು ಹೆಚ್ಚಿಸಿದಂತೆ ಆಗುವುದು' ಎಂದು ಹೇಳಿದನು.

ನಾಬೇರನ ಈ ಮಾತನ್ನು ಕೇಳಲು ಕುದುರೆಯನ್ನಪಹರಿಸಬೇಕೆಂದು ಗೊತ್ತುಮಾಡಿಕೊಂಡ ದಾಹೇರನಿಗೆ ಬಹಳ ನಾಚಿಕೆ ಹುಟ್ಟಿತು. ಆತನು ಕುದುರೆಯನ್ನು ಹಿಂದಿರುಗಿ ಓಡಿಸಿಕೊಂಡು ಬಂದು ಅದನ್ನು ನಾಬೇರನಿಗೆ ಕೊಟ್ಟು ತನ್ನ ತಪ್ಪನ್ನು ಕ್ಷಮಿಸಬೇಕೆಂದು ಕೇಳಿಕೊಂಡುದಲ್ಲದೆ ತನ್ನನ್ನು ಸ್ನೇಹಿತನನ್ನಾಗಿ ತಿಳಿಯಬೇಕೆಂದು ಬೇಡಿಕೊಂಡನು.

---

ಅನ್ನದೋಷ.

## ೨೦. ಅರಸನ ಗುರು.

ಒಂದಾನೊಂದು ಕಾಲದಲ್ಲಿ ಒಬ್ಬ ಅರಸನ ಮನೆಗೆ ಅವನ ಗುರುಗಳು ಬಂದಿದ್ದರು. ಅರಸನು ಅವರ ಸತ್ಕಾರವನ್ನು ಚೆನ್ನಾಗಿ ಮಾಡಿ ಅರಮನೆಯಲ್ಲಿಯೇ ಒಂದು ಕಡೆಗೆ ಇಳಿಸಿಕೊಂಡನು. ಗುರುಗಳಿಗೆ ಕುಳಿತುಕೊಳ್ಳುವುದಕ್ಕೆಂದು ಬಂಗಾರದಿಂದ ಮಾಡಿದ ರತ್ನಖಚಿತವಾದ ಬಹುಮೂಲ್ಯವುಳ್ಳ ಒಂದು ಆಸನವನ್ನು ಅಲ್ಲಿ ಹಾಕಿಸಿದ್ದನು. ಇರುಳು ಗುರುವಿಗೆ ಆ ಆಸನವನ್ನು ತೆಗೆದುಕೊಂಡು ಓಡಿಹೋಗಬೇಕೆಂಬ ಬುದ್ಧಿಯುಂಟಾಯಿತು. ಗುರುವು ಆ ಬದ್ಧಿಯನ್ನು ಮನೋನಿಗ್ರಹದ ಬಲದಿಂದ ಬಹುಪ್ರಯಾಸದಿಂದ ತಡೆದುಕೊಂಡನು.

ಬೆಳಗ್ಗೆ ಅರಸನು ದರ್ಶನಕ್ಕೆ ಬರಲು ಗುರುವು—'ನಿನ್ನೆ ರಾತ್ರಿ ಇಲ್ಲಿ ಇರಿಸಿದ ಆಸನವನ್ನು ಕದ್ದೊಯ್ಯಬೇಕೆಂದು ನನಗೆ ಬಯಕೆ ಹುಟ್ಟಿತ್ತು. ಈ ತರದ ಆಳಿಮನವು ನನಗೆ ಎಂದೂ ಹುಟ್ಟಿರಲಿಲ್ಲ. ನಿನ್ನೆ ಇಲ್ಲಿ ಅನ್ನದೋಷವೇನಾದರೂ ಉಂಟಾಗಿದೆಯೋ ಶೋಧಿಸಿ ಹೇಳು' ಎಂದು ಅರಸನನ್ನು ಕೇಳಿದನು. ಅರಸನು ಗೃಹಮುಹತ್ತರ ( Manager ) ನನ್ನು ಕರೆಸಿ ವಿಚಾರಿಸಲು ಒಬ್ಬ ಕಳ್ಳನು ಯಾವನೋ ಒಬ್ಬ ಶ್ರೀಮಂತನ ಮನೆಯಲ್ಲಿ ಬಹು ಶ್ರೇಷ್ಠಜಾತಿಯ ಗಂಧಶಾಲಿ ( ಅಂಬಿಮೋರಿ ) ಯ ಅಕ್ಕಿಯನ್ನು ಕದ್ದಿದ್ದನೆಂದೂ, ಆ ಕಳ್ಳನಿಗೆ ಶಿಕ್ಷೆಯಾಗಲು ಆ ಅಕ್ಕಿಯನ್ನು ಜಪ್ತುಮಾಡಿ ಸರಕಾರದ ಸ್ವಾಧೀನದಲ್ಲಿಟ್ಟುಕೊಂಡಿತ್ತೆಂದೂ, ಆ ಶ್ರೀಮಂತನು ಆ ಅಕ್ಕಿಯನ್ನು ತಿರುಗಿ ಒಯ್ಯುವುದಕ್ಕೆ ಬಹಳ ಅವಕಾಶವು ಕಂಡುಬರಲು ಅಕ್ಕಿಯು ಕೆಡುವುದೆಂದು ಲಿಲಾವು ಮಾಡಿಸಲು ಅದನ್ನು ಅರಮನೆಗಾಗಿ ಕೊಂಡಿತ್ತೆಂದೂ, ನಿನ್ನೆ ಗುರುಗಳ ಸಲುವಾಗಿ ಆ ಉತ್ತಮವಾದ ಅಕ್ಕಿಯು ಅನ್ನವಾಗಿತ್ತೆಂದೂ ತಿಳಿಯಬಂದಿತು.

ರೋಗಿಗಳ ಸಂಸರ್ಗದಿಂದ ಕೆಲವು ರೋಗಗಳ ಅಣುಜಂತುಗಳು ಹೇಗೆ ಬಂದು ಸೇರುವವೋ ಹಾಗೆಯೇ ದುಷ್ಟಜನರ ಸಂಸರ್ಗದಿಂದ ಮಾನಸಿಕ ರೋಗಗಳೂ ಬಹು ಸೂಕ್ಷ್ಮವಾಗಿ ನಮಗೆ ತಿಳಿಯದಂತೆ ಬಂದು ಸೇರುವುವು. ಪಾಶ್ಚಾತ್ಯ ವೈಜ್ಞಾನಿಕರು ಈ ಮಾತನ್ನೊಪ್ಪದಿರಬಹುದು. ಆದರೆ ಸೂಕ್ಷ್ಮದರ್ಶಿಗಳಾದ ಪ್ರಾಚೀನ ಆರ್ಯಋಷಿಗಳು ಯಾರ ಅನ್ನವನ್ನು ಪರಿಗ್ರಹಿಸಬಹುದೆಂಬ ವಿಷಯದಲ್ಲಿಯೂ ನಿಯಮಗಳನ್ನು ಹೇಳಿರುವರು. ಅನ್ನದೋಷವುಂಟಾಗದಂತೆ ನಮ್ಮನ್ನು ಎಚ್ಚರಿಸಿರುವರು.



ಪ್ರಾಮಾಣಿಕತನ.

## ೭೪. ಮೂರನೂ, ಸ್ಪಾನಿಅರ್ಡನೂ.

ಕೆಲವು ಶತಕಗಳ ಪೂರ್ವದಲ್ಲಿ ಆಫ್ರಿಕದೊಳಗಿನ ಮೊರೊಕ್ಕೋ ದೇಶದ ಮೂರರೆಂಬ ಜನರು ಸ್ಪೇನದ ಕೆಲವು ಭಾಗವನ್ನು ಗೆದ್ದು ವಶಮಾಡಿಕೊಂಡರು. ಒಂದು ದಿವಸ ಒಬ್ಬ ಸ್ಪಾನಿಅರ್ಡನು (ಸ್ಪೇನದ ಮನುಷ್ಯನು) ಒಬ್ಬ ಮೂರ ಹುಡುಗನೊಡನೆ ಜಗಳವಾಡುವಾಗ ಸಿಟ್ಟಿನಿಂದ ಅತಿಶಯ ಆವೇಶಗೊಂಡು ಆತನನ್ನು ಕೊಂದುಹಾಕಿದನು. ಬಳಿಕ, ತನ್ನನ್ನು ಹಿಡಿದೊಯ್ಯುವರೆಂಬ ಅಂಜಿಕೆಯಿಂದ ಕೂಡಲೆ ಅಲ್ಲಿಂದು ಕಾಲ್ದೆಗೆದು ಒಂದು ಹೂದೋಟವನ್ನು ಹೊಕ್ಕನು. ಆ ಹೂದೋಟದ ಆಳು ಮೂರನೇ ಆಗಿದ್ದರೂ ಸ್ಪಾನಿಅರ್ಡನು ತನ್ನನ್ನು ಈ ಸಮಯದಲ್ಲಿ ಅಡಗಿಸಿಟ್ಟು ಕಾಯಬೇಕೆಂದು ಆತನನ್ನು ಬಿನ್ನಯಿಸಿದನು.

ತೋಟಿಗನು ಒಪ್ಪಿಕೊಂಡು ನಂಬುಗೆ ತೋರುವುದಕ್ಕಾಗಿ ಆತನಿಗೊಂದು ಹಣ್ಣನ್ನು ತಿನ್ನಲು ಕೊಟ್ಟನು. ಏಕೆಂದರೆ, ಮೂರರಲ್ಲಿ ಒಮ್ಮೆ ತಮ್ಮಲ್ಲಿ ಏನಾದರೂ ತಿಂದವರನ್ನು ಕೆಡಿಸಬಾರದೆಂಬ ದೃಢಭಾವನೆಯುಂಟು. ಬಳಿಕ ಆ ತೋಟಿಗನು ಆ ಸ್ಪಾನಿಅರ್ಡನನ್ನು ತೋಟದೊಳಗಿನ ಗುಡಿಸಲಲ್ಲಿ ಅಡಗಿಸಿ, ಸಾಯಂಕಾಲ ಕತ್ತಲೆಯಾದೊಡನೆ ನಿನ್ನನ್ನು ಇದಕ್ಕಿಂತ ಸುರಕ್ಷಿತಸ್ಥಳಕ್ಕೆ ಮುಟ್ಟಿಸುವೆನೆಂದು ಹೇಳಿ ತೋಟದ ಬಾಗಿಲಿಗೆ ಬೀಗವನ್ನು ಹಾಕಿಕೊಂಡು ಮನೆಗೆ ಬಂದನು. ಅಷ್ಟರಲ್ಲಿ ಕೆಲವು ಜನರು ಅಳುತ್ತ ಎದೆ ಎದೆ ಬಡಿದುಕೊಳ್ಳುತ್ತ ಆ ತೋಟಿಗನ ಮಗನ ಹೆಣವನ್ನು ಹೊತ್ತುಕೊಂಡು ಬಂದು, ಒಬ್ಬ ಸ್ಪಾನಿಅರ್ಡನು ನಿನ್ನ ಮಗನ ಕೊಲೆಮಾಡಿದನೆಂದು ಹೇಳಿದರು. ಆಗ ಆತನು ತಾನು ತೋಟದಲ್ಲಿ ಅಡಗಿಸಿಟ್ಟ ಸ್ಪಾನಿಅರ್ಡನೇ ತನ್ನ ಮಗನನ್ನು ಕೊಂದವನೆಂದು ಊಹಿಸಿ ನಿರ್ಣಯಿಸಿದನು. ಆತನ ಮನಸ್ಸಿಗೆ ಬಹಳ ಅಸಮಾಧಾನವಾಯಿತು. ಆದರೂ ತಾನು ವಚನ ಕೊಟ್ಟುದರಿಂದ ಆ ಮೂರ ತೋಟಿಗನು ಹೊರಗೇನನ್ನೂ ತೋರಗೊಡದೆ ಮಗನ ಅಂತ್ಯಸಂಸ್ಕಾರವನ್ನು ಮುಗಿಸಿದನು.

ಸಾಯಂಕಾಲ ಒಂದು ಉತ್ತಮವಾದ ಕುದುರೆಯನ್ನು ದೊರಕಿಸಿಕೊಂಡು ಹೂದೋಟಕ್ಕೆ ಬಂದು ಆ ಸ್ಪಾನಿಅರ್ಡನನ್ನು ಅದರ ಮೇಲೆ ಕುಳ್ಳಿರಿಸಿ—ಎಲೆ!

ಕ್ರಿಸ್ತಿಮನುಷ್ಯನೇ, ನೀನು ಪ್ರತ್ಯಕ್ಷ ನನ್ನ ಮಗನ ಕೊಲೆಮಾಡಿದವನು; ನಿನ್ನನ್ನು ನಾನು ಶಿಕ್ಷಿಸಬೇಕಾದುದು ಯೋಗ್ಯವಾಗಿದ್ದರೂ ನಾನು ಕೊಟ್ಟ ವಚನವನ್ನು ಮುರಿಯುವಷ್ಟು ಹೀನತನವನ್ನು ತೋರಿಸಲಾರೆನು. ನೀನು ಈಗ ಆದಷ್ಟು ಬೇಗ ಈ ಕುದುರೆಯನ್ನೇರಿ ದೂರದ ಯಾವುದೊಂದು ಸ್ಥಳಕ್ಕೆ ಹೊರಟು ಹೋಗು; ಎಂದರೆ ನಿನ್ನನ್ನು ಯಾರೂ ಹಿಡಿಯಲಾರರು; ನೀನು ನನ್ನ ಮಗನನ್ನು ಕೊಂದಿದ್ದರೂ ನಿನ್ನ ಸಾವಿಗೆ ನಾನು ಕಾರಣವಾಗಲಿಲ್ಲವೆಂಬುದು ಯಾವ ದಯಾಘನನಾದ ಪರಮೇಶ್ವರನ ಅನುಗ್ರಹದಿಂದ ಘಟಿಸಿತೋ ಆ ಪರಮೇಶ್ವರನಿಗೆ ಅತ್ಯಂತ ಕೃತಜ್ಞನಾಗಿದ್ದೇನೆ ಎಂದು ಹೇಳಿ ಆತನಿಗೆ ಓಡಿ ಹೋಗಲಪ್ಪಣೆ ಕೊಟ್ಟನು.

---

ಸಮಯನಿಷ್ಠೆ. **೭೫. ಸೊಂಡೂರು ಪಾಂಡುರಂಗರಾಯರು.**

ಪ್ರಾಕ್ತನಜನ್ಮದಲ್ಲಿ ಸಾಧನಮಾರ್ಗದಲ್ಲಿ ಮುಂದುವರಿದ ಮಹನೀಯರು ಜನ್ಮಾಂತರವನ್ನೈದಿ ಇನ್ನೂ ಮುಂದುವರಿಯುವರು. ನೀರಲ್ಲಿದ್ದರೂ ಕಮಲ ಪತ್ರವು ನೀರಿನಿಂದ ಲಿಪ್ತವಾಗದಿರುವಂತೆ ಅವರು ಸಂಸಾರದಲ್ಲಿದ್ದರೂ ಸಂಸಾರ ಲೇಪವನ್ನು ಹತ್ತಿಸಿಕೊಳ್ಳುವುದಿಲ್ಲ. ಅವರು ಬಹುದಕ್ಷತೆಯಿಂದ ಕರ್ತವ್ಯಕ್ಕಾಗಿ ಕರ್ತವ್ಯವನ್ನು ಮಾಡುತ್ತ ತಮ್ಮ ಗುರಿಯನ್ನು ಸಾಧಿಸಿಕೊಂಡು ಹೋಗುವರು. ಈ ತರದ ಜನರಲ್ಲಿ ಸೊಂಡೂರು ಪಾಂಡುರಂಗರಾಯರು ಒಬ್ಬರು.

ಇವರು ಜಿಲ್ಲೆಯ ರಾಜಕೀಯ ಕೋಶದ ಹಿರಿಯ ಲೆಕ್ಕಿಗರಾಗಿ ( ಹೆಡ್ ಅಕೌಂಟಂಟ್ ) ಧಾರವಾಡ ಬೆಳಗಾಂವ ಜಿಲ್ಲೆಗಳಲ್ಲಿ ಕೆಲಸಮಾಡಿ ವಿಶ್ರಾಂತಿಯನ್ನು ಪಡೆದ ಬಳಿಕ ಸೂತ್ರಭಾಷ್ಯಾಧ್ಯಯನ ಮೊದಲಾದ ಪರಮಶಾಂತಿಯ ಮಾರ್ಗವನ್ನು ಚೆನ್ನಾಗಿ ಸಾಧಿಸಿಕೊಂಡು ಕೆಲವು ವರ್ಷಗಳ ಹಿಂದೆ ಇಹಲೋಕ ಯಾತ್ರೆಯನ್ನು ಮುಗಿಸಿದರು.

ಇವರ ಸಮಯನಿಷ್ಠತೆಯು ಆಶ್ಚರ್ಯಕರವಾದುದು. ಮಲಗಿ ಏಳುವ ಕಾಲ, ಊಟಕ್ಕೆ ಕುಳಿತುಕೊಳ್ಳುವ ಕಾಲ, ಕಚೇರಿಗೆ ಹೋಗುವ ಕಾಲ, ಮರಳಿ ಮನೆಗೆ ಬರುವ ಕಾಲ ಮೊದಲಾದುವುಗಳಲ್ಲಿ ಎಂದೂ ಒಂದು ನಿಮಿಷವು(ಮಿನಿಟು) ಕೂಡ ಹೆಚ್ಚು ಕಡಿಮೆಯಾಗುತ್ತಿರಲಿಲ್ಲ. ಬೆಳಗಾಂವದಲ್ಲಿ ಅವರು ಕೆಲಸಮಾಡುತ್ತಿರುವಾಗ ಬೆಳಗಿನ ವೇಳೆಯಲ್ಲಿ ರೈಸ್‌ಕೋರ್ಸ್ ಎಂಬ ಬಯಲಿಗೆ ತಿರುಗಾಡು

ವುದಕ್ಕೆ ಹೋಗುವುದು ಅವರ ವಾಡಿಕೆ. ಪಾಂಡುರಂಗರಾಯರು ಆ ಬಯಲಿನಲ್ಲಿ ಇಂತಹ ಕಡೆಯಲ್ಲಿದ್ದಾಗ ಇಷ್ಟು ಗಂಟೆ, ಇಷ್ಟು ಮಿನಿಟು ಆಗಿರುವುವೆಂದು ಅಲ್ಲಿಯ ಜನರಿಗೆ ಮನವರಿಕೆಯಾಗಿಹೋಗಿತ್ತು. ಹಲವರು ಅವರನ್ನು ಕಂಡಲ್ಲಿ ತಮ್ಮ ಗಡಿಯಾರಗಳ ವೇಳೆಯನ್ನು ಸರಿಪಡಿಸಿಕೊಳ್ಳುತ್ತಿದ್ದರಂತೆ! ಊಟದ ವೇಳೆಗೆ ಎಲೆಯ ಮುಂದೆ ಬಂದು ಕುಳಿತರೆಂದರೆ ಅಡಿಗೆಯಾಗಿರಲಿ, ಆಗದಿರಲಿ, ಅದನ್ನು ಬಡಿಸಿಯೇ ತೀರಬೇಕು. ಅಡಿಗೆಯವನಿಗಾಗಲಿ, ಧರ್ಮಪತ್ನಿಗಾಗಲಿ ಒಂದು ನಿಮಿಷ ತಡೆಯಿರಿ ಎಂದು ಹೇಳಲು ಎಂದೂ ಧೈರ್ಯವಾಗಲಿಲ್ಲ.

ಊಟಕ್ಕೆ ಗೊತ್ತಾದ ವೇಳೆಯಲ್ಲಿ ಊಟವು ಮುಗಿಯಲೇಬೇಕು. ಕಚೇರಿಗೆ ಹೊರಡುವ ವೇಳೆಗೆ ತಮ್ಮ ಗಾಡಿಯು ಸಿದ್ಧವಾಗಿರಲಿ, ಇಲ್ಲವೆ ಇಲ್ಲದಿರಲಿ ಹೊರಟೇ ತೀರಬೇಕು. ಗಾಡಿಯಿಲ್ಲದ ದಿವಸ ಇಮ್ಮಡಿ ವೇಗದಿಂದ ನಡೆಯುವ ಆಯಾಸವನ್ನು ಆನಂದದಿಂದ ತಾಳಿಕೊಳ್ಳುವರು. ಪಾಂಡುರಂಗರಾಯರೆಂದರೆ ಜೀವಂತವಾದ ಒಂದು ಗಡಿಯಾರ ಎಂದು ಹೇಳುವಂತೆ ಆಗಿತ್ತೆಂದು ಆ ಕಾಲದ ಹಿರಿಯರು ಈಗಲೂ ಹೇಳುತ್ತಿರುವರು.

ಪೂರ್ವಕಾಲದಲ್ಲಿ ಆರ್ಯರು ೨೫ ವರ್ಷಗಳ ವರೆಗೆ ಬ್ರಹ್ಮಚರ್ಯವನ್ನು ಪಾಲಿಸಿ ಮುಂದೆ ೨೫ ವರ್ಷಗಳ ವರೆಗೆ ಗೃಹಸ್ಥಾಶ್ರಮದಲ್ಲಿ ಚೆನ್ನಾಗಿ ಸಂಸಾರವನ್ನು ಮಾಡುವರು. ಮುಂದೆ ಆ ವರೆಗೆ ತಾವು ಸಂಪಾದಿಸಿದ ಸಂಪತ್ತಿಯಲ್ಲಿ ಮಕ್ಕಳು ಮರಿಗಳಿಗೆ ಇಡುವಷ್ಟನ್ನು ಇಟ್ಟು ಬಹುಭಾಗವನ್ನು ಸತ್ಪಾತ್ರಗಳಿಗೂ ದೀನಾನಾಥರಿಗೂ ದಾನಮಾಡಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವರು. ಮನುಷ್ಯನ ಆಯುಷ್ಯ ಕ್ರಮದಲ್ಲಿ ಇದೊಂದು ಕ್ರಾಂತಿಯ ಸಮಯವು.

ಈಗ ವಾನಪ್ರಸ್ಥಾಶ್ರಮವು ಇಲ್ಲದಿದ್ದರೂ ಆ ವಯಸ್ಸಿನಿಂದ ಮುಂದೆ ಧರ್ಮಾಚರಣೆಯಲ್ಲಿಯೂ, ಪಾರಮಾರ್ಥಿಕ ವಿಚಾರದಲ್ಲಿಯೂ ಕಾಲವನ್ನು ಕಳೆವುದಕ್ಕೆ ಯಾವ ಅಡ್ಡಿಯೂ ಇಲ್ಲ. ೫೫ ವರ್ಷಗಳಾದ ಬಳಿಕ ನೌಕರರಿಗೆ ಸರಕಾರದವರು ಪೆನ್ಶನ್ ಕೊಟ್ಟು ವಿಶ್ರಾಂತಿಯನ್ನು ಕೊಡುವುದರಿಂದ ವಾನಪ್ರಸ್ಥಾಶ್ರಮಿಗಳಂತೆ ಸಂಸಾರಮೋಹವನ್ನು ಕಡಿಮೆಮಾಡಿಕೊಳ್ಳುವುದನ್ನು ಸಾಧಿಸುವುದಕ್ಕೆ ಅನುಕೂಲವಾಗುವುದು. ಆದರೆ ಬಹುಜನ ನೌಕರರು ಮನೋದೌರ್ಬಲ್ಯದಿಂದ ಸಂಸಾರಮೋಹ ಪರವಶರಾಗಿ ನೌಕರಿಯನ್ನು ಬಿಡುವಾಗ ಗೋಳಾಡು

ವರು; ಹಲವರನ್ನು ಸರಕಾರದವರು ಬಲುಮೆಯಿಂದ ಬಿಡಿಸಬೇಕಾಗುವದು. ಬಿಡಿಸಿದ ಬಳಿಕ ಅವರು ಮನೆಯ ಲಂಪಟದಲ್ಲಿಯೇ ತೊಳಲಾಡುವರು.

ಪಾಂಡುರಂಗರಾಯರಿಗೆ ೫೫ ವರ್ಷಗಳಾದುವು; ಆ ಮೊದಲೇ ಇವರು ಅವಧಿಗೆ ಸರಿಯಾಗಿ ನೌಕರಿಯಿಂದ ನಿವೃತ್ತರಾಗಬೇಕೆಂಬ ಸಿದ್ಧತೆಯಲ್ಲಿದ್ದರು; ಇತ್ತ ಸರಕಾರದವರು ಇನ್ನೂ ಕೆಲವು ವರ್ಷ ಇವರನ್ನು ನೌಕರಿಯಲ್ಲಿಟ್ಟುಕೊಳ್ಳ ಬೇಕೆಂದು ಹವಣಿಸಿದ್ದರು. ಕಲೆಕ್ಟರ್ ಸಾಹೇಬರು, ನಿಮ್ಮ ನೌಕರಿಯನ್ನು ಹೆಚ್ಚಿ ಸುವದಕ್ಕೆ ಬರೆಯುವೆವೆಂದೂ ನೀವು ಇನ್ನೂ ಕೆಲವು ವರ್ಷ ನೌಕರಿಯಲ್ಲಿ ಇರ ಬೇಕೆಂದೂ ಹಲವು ಬಾರಿ ಬಿನ್ನಯಿಸಿದ್ದರು. ಆದರೆ ರಾಯರು, ತಾನಾರು, ಎತ್ತ ನಡೆದಿರುವೆನು, 'ತಾನು ಯಾವಾಗ ಏನು ಮಾಡಬೇಕಾದುದು ಎಂಬ ಆತ್ಮ ದೃಷ್ಟಿಯಿಲ್ಲದ ಕೀಳುಮಾನವರಲ್ಲ; ಅವರು ತಮ್ಮ ದಿನದ ಸಣ್ಣಸಣ ಕೆಲಸಗಳಿಗೆ ಕೂಡ ಒಂದು ಮಿನಿಟಿನ ವಿಲಂಬವನ್ನೂ ಮಾಡಿದವರಲ್ಲ ಮುಂದಿನ ತಮ್ಮ ಆಯುಷ್ಯದಲ್ಲಿ ಮಾಡಬೇಕಾದ ಪರಮಾರ್ಥವಿಚಾರದಂತಹ ಮಹತ್ವದ ಕರ್ತ ವ್ಯದ ಕಾಲವನ್ನು ಅವರು ಮುಂದೆ ಹಾಕುವದು ಅಸಂಭವನೀಯವಾಗಿತ್ತು. ಅವರು ೫೫ನೆಯ ವರ್ಷವು ತುಂಬಿದ ದಿವಸ ಎಂದಿನಂತೆ ಕಚೇರಿಗೆ ಹೋಗಿ ೧೨ ಗಂಟೆಗೆ ಸರಿಯಾಗಿ ತಮ್ಮ ವರಿಷ್ಠರಾದ ಕಲೆಕ್ಟರ್ ಸಾಹೇಬರ ಬಳಿಗೆ ಹೋಗಿ ಪೆನ್‌ಶನ್ ಅರ್ಜಿಯನ್ನು ಇದಿರಿಗೆ ಇಟ್ಟು ಮನೆಗೆ ಹೋಗಲು ಅಪ್ಪಣೆಯನ್ನು ಬೇಡಿದರು. ಕಲೆಕ್ಟರ್ ಸಾಹೇಬರು, ತಮ್ಮಂತಹ ನೌಕರರ ನೌಕರಿಯನ್ನು ಇನ್ನೂ ಕೆಲವು ವರ್ಷ ಸರಕಾರವು ಅಪೇಕ್ಷಿಸುತ್ತಿರುವುದೆಂದೂ, ತಮಗೆ ಯಾವ ತರದ ಅಗೌರವವೂ ಆಗಲಾರದೆಂದೂ ಪರಿಪರಿಯಿಂದ ಹೇಳಿ ನೌಕರಿಯಲ್ಲಿರು ವುದಕ್ಕೆ ಆದರದಿಂದ ಬಿನ್ನಯಿಸಿದರು. ಮತ್ತು ಆಂತರಿಕ ಪ್ರೇಮದಿಂದ ನಿಮ್ಮ ಅರ್ಜಿಯನ್ನು ಸ್ವೀಕರಿಸಲಾರೆನೆಂದು ಹೇಳಿನೋಡಿದರು. ಆದರೇನು, ರಾಯ ರಲ್ಲಿ ಭೀಷ್ಮನ ಮನೋದಾರ್ಢ್ಯವು! ಆಗ ರಾಯರು ಕಲೆಕ್ಟರ್ ಸಾಹೇಬರನ್ನು ಕುರಿತು.—ನಾನು ಈ ಘಂಟೆಯಿಂದ ತಮ್ಮ ನೌಕರನಲ್ಲ; ನಾನೊಬ್ಬ ಸ್ವತಂತ್ರ ಸದ್ಗೃಹಸ್ಥನು; ತಾವೂ ಈ ಘಂಟೆಯಿಂದ ನನ್ನ ಮೇಲಿನ ಅಧಿಕಾರಿಗಳಲ್ಲ; ತಾವೊಬ್ಬ ಸದ್ಗೃಹಸ್ಥರೆಂಬ ಭಾವನೆಯಿಂದ ತಮ್ಮ ಉಪದೇಶವನ್ನು ಕೇಳಿ ಕೊಂಡೆನು; ಆದರೆ ಅದರಂತೆ ನಡೆಯಬೇಕೆಂಬ ಬಲುಮೆಯನ್ನು ತಾವು ನಡೆ ಯಿಸಲಾರಿರಿ; ಅರ್ಜಿಯನ್ನು ಸ್ವೀಕರಿಸುವುದೂ, ಸ್ವೀಕರಿಸದಿರುವುದೂ ತಮ್ಮ

ಇಚ್ಛೆಯನ್ನವಲಂಬಿಸಿದೆ; ನಾನು ಹೊರಟೆನು ಎಂದು ಹೇಳಿ ನಮಸ್ಕಾರಮಾಡಿ ಎದ್ದು ನಿಂತರು. ಕಲೆಕ್ಟರ್ ಸಾಹೇಬರು ಕಣ್ಣೀರುಗಳನ್ನು ಹೇಗೋ ತಡೆದು ಕೊಂಡು ರಾಯರಿಗೆ ಮನ್ನಣೆಯಿಂದ ಅಪ್ಪಣೆಕೊಟ್ಟರು. ಆ ಕ್ಷಣದಿಂದ ಪಾಂಡು ರಂಗರಾಯರು ತಾವು ನೌಕರರಿದ್ದೆವೆಂಬುದನ್ನು ಪೂರ್ಣವಾಗಿ ಮರೆತು ಮುಂದಿನ ಕರ್ತವ್ಯದಲ್ಲಿ ತೊಡಗಿದರು.

---

ಸಂಸಾರನಿರ್ಲಿಪ್ತತೆ. **೭೬. ಸೊಂಡೂರು ಪಾಂಡುರಂಗರಾಯರು.**

ಹೊರಹೊರಗೆ ನೋಡುವವರು, ಇಷ್ಟೊಂದು ನಿಯತವಾಗಿ ಯಂತ್ರ ದಂತೆ ನಡೆಯುತ್ತ ಜಗತ್ತಿನ ಬೇರೆ ಕೋಲಾಹಲಗಳ ಕಡೆಗೆ ದೃಷ್ಟಿಯನ್ನಿಡದೆ ನೀರಸವಾಗಿ ಆಯುಷ್ಯಕ್ರಮಣಮಾಡುವುದರಲ್ಲಿ ಪುರುಷಾರ್ಥವೇನೆಂದು ಪಾಂಡು ರಂಗರಾಯರ ಚರಿತವನ್ನಾಕ್ಷೇಪಿಸುವರು. ಆದರೆ ಇಂತಹ ಜನರ ಜೀವನರಹ ಸ್ಯವನ್ನು ನೋಡಿದರೆ ಇವರು ಸಂಸಾರಮೋಹವನ್ನಂಟಿಸಿಕೊಳ್ಳದೆ ತಮ್ಮ ಧ್ಯೇಯವೊಂದರ ಕಡೆಗೇ ದೃಷ್ಟಿಯನ್ನಿಟ್ಟ ಸಾಧಕಪುರುಷರೆಂದು ಮನಗಾ ಣಬಹುದು.

ಇವರ ಮಗ ಭಗವಂತರಾಯನು ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದವನು. ನೌಕರಿಯನ್ನು ಸಂಪಾದಿಸಲು ಪ್ರಯತ್ನಿಸತೊಡಗಿ ದನು. ಆ ಕಾಲದಲ್ಲಿ ಸ್ಕೂಲ್‌ಫಾಯನಲ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದವನಿಗೆ ನೌಕರಿಯನ್ನು ಕೊಡಬೇಕೆಂದು ಸರಕಾರದ ಗೊತ್ತುವಳಿ ( ಕಾಯದೆ ) ಯಾಗಿ ದ್ದಿತು. ಆದರೂ ಭಗವಂತರಾಯನು ಮೇಲಿನ ಅಧಿಕಾರಿಗಳಲ್ಲಿರುವ ತಂದೆಯ ಗೌರವದಿಂದ ತಾನು ನೌಕರಿಯನ್ನು ಸಂಪಾದಿಸಬಹುದೆಂದು ತಿಳಿದು ತಾಯಿ ಯಿಂದ ತಂದೆಯ ಬಳಿಯಲ್ಲಿ ಈ ಪ್ರಸ್ತಾವವನ್ನೆತ್ತಿಸಿದನು. ಪಾಂಡುರಂಗರಾಯರು ಅರ್ಜಿಯನ್ನು ಕೊಡಹೇಳಿದರು. ಅದು ತಮ್ಮ ಕಡೆಗೆ ಬಂದಕೂಡಲೆ ಅದರ ಕೆಳಗೆ—ಈತನು ಸ್ಕೂಲ್‌ಫಾಯನಲ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿಲ್ಲವಾದು ದರಿಂದ ಸರಕಾರದ ಗೊತ್ತುವಳಿಯ ಮೇರೆಗೆ ಸರಕಾರದ ನೌಕರಿಗೆ ಅರ್ಹನಲ್ಲ ವೆಂದೂ, ಕಲೆಕ್ಟರ್ ಸಾಹೇಬರು ಸರಕಾರದ ಗೊತ್ತುವಳಿಯನ್ನತಿಕ್ರಮಿಸಿ ಬೇಕಾ ದರೆ ನೌಕರಿಯನ್ನು ಕೊಡಬಹುದೆಂದೂ ಬರೆದರು. ಪಾಂಡುರಂಗರಾಯರು

ಮಗನ ಪ್ರಶಂಸೆಯನ್ನು ಮಾಡಿ ನೌಕರಿಯನ್ನು ಕೊಡಲು ' ಶಿಫಾರಸು ' ಬರೆಯ ಬಹುದೆಂದು ಕಲೆಕ್ಟರ್ ಸಾಹೇಬರು ನಿರೀಕ್ಷಿಸಿದ್ದರು. ರಾಯರಲ್ಲಿ ಭಯಭಕ್ತಿಗಳ ನ್ನಿಟ್ಟುಕೊಂಡ ಕಲೆಕ್ಟರ್ ಸಾಹೇಬರು ಇವರ ಮಗನಿಗೆ ನೌಕರಿಯನ್ನು ಕೊಟ್ಟು ಇವರಿಗೆ ಉಪಕಾರಮಾಡುವ ಯೋಗವು ಒಮ್ಮೆಯಾದರೂ ಬರಲಿ ಎಂದು ನಿರೀಕ್ಷಿಸಿಕೊಂಡಿದ್ದರು. ಆದರೆ ರಾಯರ ಈ ಬರಹದಿಂದ ಆ ಯೋಗವು ಒದಗಿ ಬರಲಿಲ್ಲವಲ್ಲ ಎಂದು ಮರುಗಿದರೂ ಇವರ ನಿರ್ಮೋಹವೃತ್ತಿಗೆ—ಸ್ವಾರ್ಥಪರಾ ಙ್ಮುಖವೃತ್ತಿಗೆ—ರಾಜಶಾಸನ ( ಕಾಯಿದೆ ) ಗಳ ಮೇಲಿನ ದೃಢವಾದ ಗೌರವ ಬುದ್ಧಿಗೆ—ಬೆರಗಾದರು.

ದಕ್ಷಿಣಭಾಗದ ಎಜ್ಯುಕೇಶನಲ್ ಇನ್ಸಪೆಕ್ಟರರಾಗಿದ್ದ ಕೈ. ಕರಂದೀಕರ ರಾವಜಿರಾಯರು ಇವರ ಪರಮಸ್ನೇಹಿತರು. ಸಮಯನಿಷ್ಠೆಯಲ್ಲಿ ಹೆಸರು ಗೊಂಡ ಆ ಮಹನೀಯರು ಪಾಂಡುರಂಗರಾಯರ ಸಮಯನಿಷ್ಠೆಯನ್ನು ನೋಡಿ ಕೌತುಕಬಡುವರು.

ಪಾಂಡುರಂಗರಾಯರ ಇನ್ನೊಬ್ಬ ಮಗನು ಸ್ಕೂಲ್‌ಫಾಯನಲ್ ಪರೀಕ್ಷೆ ಯಲ್ಲಿ ತೇರ್ಗಡೆಹೊಂದಿದ್ದನು. ಆತನಿಗೆ ಪಾಂಡುರಂಗರಾಯರು ರೆವ್ಹಿನ್ಯೂ ಡಿಪಾರ್ಟಮೆಂಟಿನಲ್ಲಿ ನೌಕರಿಯನ್ನು ಕೊಡಿಸಬಹುದೆಂದು ರಾವಜಿರಾಯರು ತಿಳಿದುಕೊಂಡಿದ್ದರು. ಆದರೆ ಪಾಂಡುರಂಗರಾಯರು ಯಾವ ಮೇಲಧಿಕಾರಿಗೂ ಈ ವಿಷಯವಾಗಿ ಒಂದು ಮಾತನ್ನೂ ಹೇಳಲಿಲ್ಲ. ಕೊನೆಗೆ ರಾವಜಿರಾಯರೇ ತಮ್ಮ ಡಿಪಾರ್ಟಮೆಂಟಿನಲ್ಲಿ ಅವರ ಮಗನಿಗೆ ನೌಕರಿಯನ್ನು ಕೊಟ್ಟರು.

---

## ತಾಯ್ನಾಡಿನ ಅಭಿಮಾನ. ೭೭. ಕರಂದೀಕರ ರಾವಜಿರಾಯರು.

ಕೈ. ರಾವಜಿರಾಯರು ಕೊಂಕಣಸ್ಥರು; ಅವರ ಹುಟ್ಟುನುಡಿ ಮರಾ ಠಿಯು; ಅವರ ಪೂರ್ವಜರ ಹುಟ್ಟುನಾಡು ಕೊಂಕಣವು; ಆದರೆ ಅವರ ಪೂರ್ವಜರು ಕರ್ನಾಟಕದಲ್ಲಿ ವಸತಿಯು ಮಾಡಿದುದರಿಂದ ರಾವಜಿಯವರು ಕರ್ನಾಟಕದ ಅನ್ನವನ್ನುಂಡು ಬೆಳೆದರು; ಬಾಲ್ಯದಿಂದ ಕನ್ನಡನುಡಿಯನ್ನಾಡಿ ದರು. ಆದುದರಿಂದ ಅವರು ಕರ್ನಾಟಕವು ತಮ್ಮ ತಾಯ್ನಾಡೆಂದೂ, ಕನ್ನಡ ನಾಡಿಗೇ ತಮ್ಮ ಹಿತಾಹಿತಗಳೂ, ಆಗುಹೋಗುಗಳೂ ಸಂಬಂಧಪಟ್ಟಿರುವು

ವೆಂದೂ ವಿಚಾರದಿಂದ ಮನಗಂಡು, ಹೊರಹೊರಗೆ ಕೆಲಮಟ್ಟಿಗೆ ಮರಾಠಿಗರ ಅಭಿಮಾನವನ್ನು ತೋರ್ಪಡಿಸಿದಂತೆ ನಟಿಸಿದರೂ ಅಂತರಂಗದಲ್ಲಿ ಕನ್ನಡಿಗರ ಅಭಿಮಾನವನ್ನು ಪೂರ್ಣವಾಗಿ ಇಟ್ಟುಕೊಂಡಿದ್ದರು. ಹಲವು ಜನ ಕನ್ನಡಿಗರನ್ನು ಎತ್ತಿ ಹಿಡಿದರು. ಕನ್ನಡನುಡಿಗೆ ಸಾಧ್ಯವಾದಮಟ್ಟಿಗೆ ಉತ್ತೇಜನವನ್ನು ಕೊಟ್ಟರು.*

ಅವರು ತಮ್ಮ ಜೀವನದಲ್ಲಿ ಒಂದೇ ಧ್ಯೇಯುವನ್ನಿಟ್ಟುಕೊಂಡು ನಡೆದರು. ಅದಾವುದೆಂದರೆ—ಹಿಂದುಳಿದ ಕನ್ನಡನಾಡಿನ ಜನರಲ್ಲಿ ಜಾಗ್ರತಿಯನ್ನುಂಟು ಮಾಡಬೇಕೆಂಬುದು. ಈ ಜಾಗ್ರತಿಗೆ ಶಿಕ್ಷಣವು ಪ್ರಬಲವಾದ ಸಾಧನವೆಂದೂ, ಅದು ಅವರಿಗೆ ದೊರೆಯುವಂತೆ ಅನುಕೂಲತೆಗಳನ್ನು ಕಲ್ಪಿಸಿಕೊಡುವುದು ಮುಂದಾಳುಗಳ ಮುಖ್ಯಕರ್ತವ್ಯವೆಂದೂ ಅರಿತು ಈ ಕಾರ್ಯವನ್ನು ತಮ್ಮಿಂದಾದಷ್ಟು ಮಾಡಲೋಸುಗ ತಮ್ಮ ಸಮಗ್ರ ಆಯುಷ್ಯದಲ್ಲಿ ಪೈಗೆ ಪೈ ಕೂಡಿಸಿ ಸಂಪಾದಿಸಿದ ಸುಮಾರು ೨ ಲಕ್ಷ ರೂಪಾಯಿಗಳನ್ನು ಕನ್ನಡಿಗರ ಶಿಕ್ಷಣಕ್ಕಾಗಿ ಕೃಷ್ಣಾರ್ಪಣವೆಂದು ದಾನಮಾಡಿದರು!

---

## ೭೮. ಬಂಕಾಪುರದ ಬಂಕನಾಥಯ್ಯನು.

ಧರ್ಮೋಪದೇಶವು ಸಾಧುವಿನ ಕರ್ತವ್ಯವು.

ಬಂಕನಾಥಯ್ಯನು ಬಂಕಾಪುರದಲ್ಲಿ ನಿತ್ಯಭಿಕ್ಷೆಗೆ ಬರುವನು. ಆತನು ಆವೂರ ಬಳಿಯಲ್ಲಿರುವ ಬಂಕನಾಥಕಟ್ಟೆ ಎಂಬ ದೇವಾಲಯದಲ್ಲಿದ್ದುಕೊಂಡು ದಾರಿಕಾರರಿಗೆ ಅನುಕೂಲತೆಗಳನ್ನು ಮಾಡಿಕೊಡುವನು. ಪ್ರತಿದಿನದ ಹೊಟ್ಟೆಗೆ ಸಾಲುವಷ್ಟೇ ಕಾಳುಗಳನ್ನು ಬೇಡಿ ತಂದು ತಾನೇ ಅಟ್ಟು ಉಣ್ಣುವನು. ಈತನ ನಡೆನುಡಿಗಳಿಗೂ ತಪಸ್ಸಿಗೂ ಮೆಚ್ಚಿದ ಜನರು ಈತನಿಗೆ ಆದರದಿಂದ ಭಿಕ್ಷೆಯನ್ನು ನೀಡುವರು. ಮುಷ್ಟಿಭಿಕ್ಷೆಯನ್ನಲ್ಲದೆ ಮತ್ತೇನನ್ನೂ ಸ್ವೀಕರಿಸನು.

ಆವೂರಲ್ಲಿ ಒಬ್ಬ ಹೆಣ್ಣುಮಗಳು ಯಾರಿಗೂ ಭಿಕ್ಷೆಯನ್ನು ನೀಡುತ್ತಿರಲಿಲ್ಲ. ಬಂದವರನ್ನು ಬಯ್ದು ಕಳುಹುವಳು; ಬಂಕನಾಥಯ್ಯನು ಆಕೆಯ ಮನೆಗೂ

---

* ಪ್ರಸ್ತುತಲೇಖಕನು ಕನ್ನಡ ನುಡಿಯಲ್ಲಿ ಕಿಂಚಿತ್-ಜ್ಞಾನವನ್ನು ಸಂಪಾದಿಸಿದುದಕ್ಕೆ ಈ ಮಹನೀಯರ ಸಹಾಯುವೆ ಕಾರಣವೆಂದು ಕೃತಜ್ಞತಾಪೂರ್ವಕವಾಗಿ ಇಲ್ಲಿ ಉಲ್ಲೇಖಿಸುತ್ತಾನೆ.

ಲೇಖಕ.

ಪ್ರತಿದಿನ ಹೋಗುವನು; ಬಯ್ಸಿಕೊಂಡು ಮುಂದಿನ ಮನೆಯ ದಾರಿಯ ಹಿಡಿಯುವನು. ಊರ ಜನರು—ಸ್ವಾಮಿ, ಬೇಕಾದಷ್ಟು ಮನೆಗಳಿರಲು ಆಕೆಯ ಮನೆಗೆ ಏಕೆ ಹೋಗುವಿರಿ? ಆಕೆ ಯಾರಿಗೂ ಏನನ್ನೂ ನೀಡಿದವಳಲ್ಲ ಎಂದು ಹೇಳುವರು. ಸ್ವಾಮಿಯು ಸುಮ್ಮನೆ ನಗುವನು; ಆದರೆ ಪ್ರತಿದಿನ ಹೋಗುವುದನ್ನು ಮಾತ್ರ ಬಿಡುತ್ತಿರಲಿಲ್ಲ. ಒಂದುದಿನ ಆ ಹೆಣ್ಣುಮಗಳು ಮನೆಯನ್ನು ಬಳಿಯುತ್ತಿದ್ದಳು. ಏಕೋ ರೇಗಿದ್ದಳು. ಸಾಧುವು ಭಿಕ್ಷೆಗೆ ಹೋದಕೂಡಲೆ ಕೈಯೊಳಗಿನ ಸಾರಣೆಯ ಅರಿವೆಯ ಗುಂಡುಮಾಡಿ ಅದನ್ನು ಅತನ ಮೇಲೆ ಒಗೆದಳು. ಹಾಗೆ ಒಗೆಯಿಸಿಕೊಂಡು ಬಂದ ಸಾಧುವನ್ನು ಕಂಡು ಜನರು—ಸ್ವಾಮಿ ನಾವು ಹೋಗಬೇಡವೆಂದು ಹೇಳುತ್ತಿದ್ದರೂ ಹೋಗುತ್ತ ಬಂದಿರಿ; ಅದರ ಫಲವಿದು, ಎಂದು ಮರುಗಿದರು. ಸಾಧುವು ನಗುತ್ತ—ಹಾ! ಇದು ನೋಡಿರಿ; ಈ ದಿನದಿಂದ ಆ ಹೆಣ್ಣುಮಗಳ ಪ್ರತಿಜ್ಞಾಭಂಗವಾಯಿತು; ಯಾರಿಗೂ ಏನನ್ನೂ ಕೊಟ್ಟಿರಲಿಲ್ಲವೆಂದು ಹೇಳಿದಿರಿ; ಈ ದಿನದಿಂದ ಕೊಡುವುದಕ್ಕೆ ಆರಂಭವಾಯಿತು; ಎಂದು ಆಕೆ ಹೊಡೆದ ಸೆಗಣಿಯ ಅರಿವೆಯನ್ನು ತೋರಿಸಿದನು.

ಬಂಕನಾಥಯ್ಯನು ಮರುದಿನ ಆ ಅರಿವೆಯನ್ನು ಚೆನ್ನಾಗಿ ಒಗೆದುಕೊಂಡು ಹೋಗಿ ಆ ಹೆಣ್ಣುಮಗಳನ್ನು ಕುರಿತು—ಅಮ್ಮಾ, ನನಗೆ ನಿನ್ನೆ ಕೊಟ್ಟ ಅರಿವೆಯು ಬೇಕಾಗಿಲ್ಲ; ಆದುದರಿಂದ ಮರಳಿ ತಂದಿರುವೆನು; ಈ ದಿನ ಅನುಕೂಲತೆಯಿದ್ದರೆ ನನಗೆ ಮುಷ್ಟಿಕಾಳನ್ನು ನೀಡಿದರೆ ಸಾಕು, ಎಂದು ಸಮಾಧಾನದಿಂದ ನುಡಿದನು. ಲೋಭದಿಂದ ಕಲ್ಲಾದ ಅವಳ ಹೃದಯವು ಕರಗಿ ನೀರಾಯಿತು. ಆಕೆಯ ಮೋಹವು ಅಳಿಯಿತು. ಸಾಧುಪುರುಷನ ಮಹಿಮೆಯನ್ನು ಕಂಡು ಆಕೆಯ ಕಣ್ಣಲ್ಲಿ ನೀರುಗಳು ಬಂದುವು. ಅಂದಿನಿಂದ ಬಂದವರಿಗೆ ಮುಷ್ಟಿಭಿಕ್ಷೆಯನ್ನು ನೀಡತೊಡಗಿದಳು. ಸೋಮವಾರಕ್ಕೊಮ್ಮೆ ಬಂಕನಾಥನ ಕಟ್ಟೆಗೆ ಹೋಗಿ ಸ್ವಾಮಿಯ ದರ್ಶನವನ್ನು ಮಾಡಿಕೊಂಡು ಬರುವಳು.

---

ಮಕ್ಕಳಶಿಕ್ಷಣ. **೭೯. ಇಂಗ್ಲೆಂಡದ ಅರಸುಮನೆತನದಲ್ಲಿ.**

ವಿಕ್ಟೋರಿಯಾಮಹಾರಾಣಿಯವರೂ, ಅವರ ಪತಿಯಾದ ಪ್ರಿನ್ಸ್‌ಅಲ್ಬರ್ಟರವರೂ ಮಕ್ಕಳ ಶಿಕ್ಷಣವಿಷಯದಲ್ಲಿ ಬಹಳ ಜಾಗರೂಕತೆಯುಳ್ಳವರಾಗಿದ್ದರು.

ಒಂದಾನೊಂದು ದಿವಸ ಸಮುದ್ರತೀರದಲ್ಲಿ ತಿರುಗಾಡುವುದಕ್ಕೆಂದು ಹೋದಾಗ ರಾಜಕುಮಾರನಾದ ಎಡ್ವರ್ಡನು (ಮುಂದೆ ೭ನೆಯ ಎಡ್ವರ್ಡ ಬಾದಶಹರು) ಮೀನ ಹಿಡಿಯುತ್ತಿದ್ದ ಬಲೆಗಾರ ಹುಡುಗನ ಹತ್ತಿರ ಹೋಗಿ ತೊಂದರೆಗೊಳಿಸಲು ಆ ಹುಡುಗನು ರಾಜಕುಮಾರನನ್ನು ಹೊಡೆಯಹೋದನು. ಪ್ರಿನ್ಸಅಲ್ಬರ್ಟರವರು ಈ ಸಮಯದಲ್ಲಿ ಮಗನಿಗೇ ಛೀ ಹಾಕಿದರು.

ಎಡ್ವರ್ಡಬಾಲಕನು ೭ ವರ್ಷದವನಿರುವಾಗ ತಂದೆತಾಯಿಗಳು ಆತನ ಸಲುವಾಗಿ ಅರಮನೆಯ ಬಳಿಯಲ್ಲಿ ಒಂದು ಹೊಲವನ್ನೂ ಒಂದು ಕಾರ್ಖಾನೆಯನ್ನೂ ಏರ್ಪಡಿಸಿಕೊಟ್ಟರು. ಈ ಹೊಲದಲ್ಲಿ ಬಾಲಕನು ತಾನೇ ನೆಲವನ್ನು ಅಗೆದು ಗಿಡಗಳನ್ನು ನೆಟ್ಟು ಹೂವುಹಣ್ಣುಗಳ ಹುಟ್ಟುವಳಿ ಮಾಡುವುದನ್ನು ಕಲಿಯುವನು; ಕಾರ್ಖಾನೆಯಲ್ಲಿ ತಾನೇ ಇಟ್ಟಿಗೆಗಳನ್ನು ಮಾಡಿಕೊಂಡು ಮನೆಯನ್ನು ಕಟ್ಟುವನು. ಕಟ್ಟಿಗೆಯನ್ನು ಕೊರೆದುಕೊಂಡು ಕುರ್ಚಿ ಮೇಜು ಮಾಡುವುದನ್ನು ಕಲಿಯುವನು. ಉದ್ಭಿಜ್ಜಶಾಸ್ತ್ರ, ಭೂ-ಶಾಸ್ತ್ರ, ಪ್ರಾಣಿಶಾಸ್ತ್ರ ಇವುಗಳನ್ನು ಕಲಿಯುವುದಕ್ಕೆ ಅರಮನೆಯ ಬಳಿಯಲ್ಲಿ ಒಂದು ಪ್ರಯೋಗ ಶಾಲೆಯೂ ಇದ್ದಿತು.

ವಿಕ್ಟೋರಿಯಾ ಮಹಾರಾಣಿಯವರ ಮೊಮ್ಮಕ್ಕಳಿಗೂ ಇದೇ ಮೇರೆಗೆ ಶಿಕ್ಷಣವು ದೊರೆಯುತ್ತಿದ್ದಿತು. ಯಾರೂ ವಿಲಾಸಿಗಳಾಗದಂತೆ ಎಚ್ಚರ ಪಡುತ್ತಿದ್ದರು.

ರಾಜಕುಮಾರರ ದಿನದ ಪಾಠಗಳು ಮುಗಿದಕೂಡಲೆ ಪುಸ್ತಕ, ದೌತಿ ಲೆಕ್ಕಣಿಕೆ ಮೊದಲಾದವುಗಳನ್ನೆಲ್ಲ ಅವರೇ ಅವವುಗಳ ಸ್ಥಳದಲ್ಲಿ ಇಡಬೇಕು. ಒಂದು ದಿವಸ ಪಾಠವು ಮುಗಿದ ವೇಳೆಗೆ ವಿಕ್ಟೋರಿಯಾ ಮಹಾರಾಣಿಯವರು ಅಲ್ಲಿಗೆ ಬರಲು ಜಾರ್ಜನು (ಮುಂದೆ ಪಂಚಮ ಜಾರ್ಜಬಾದಶಹರು) ಅಜ್ಜೀ, ಈ ದಿವಸ ಈ ಪುಸ್ತಕ ಮೊದಲಾದವುಗಳನ್ನೆಲ್ಲ ನೀನೇ ಅಲ್ಲಲ್ಲಿ ಇಟ್ಟು ಕೊಡ

ಬಾರದೇ ಎಂದು ಕೇಳಿಕೊಂಡನು. ಮಹಾರಾಣಿಯವರು ನಕ್ಕು ಚಿಕ್ಕ ಮೊಮ್ಮ ಗನ ಈ ಬಯಕೆಯನ್ನು ಅವೊಂದು ದಿವಸ ಪೂರ್ಣಮಾಡಿದರು.

ಜಾರ್ಜ ರಾಜಕುಮಾರನು ೧೨ ವರ್ಷದವನಿರುವಾಗ ಆತನನ್ನು ಒಂದು ಯುದ್ಧದ ಹಡಗದಲ್ಲಿ ಶಿಕ್ಷಣಕ್ಕಾಗಿ ಇಟ್ಟರು. ಅಲ್ಲಿ ಇವನಿಗೆ ಪ್ರತ್ಯೇಕವಾಗಿ ಮಲಗುವ ಕೋಣೆಯೊಂದು ಇದ್ದಿತಲ್ಲದೆ ಉಳಿದ ಊಟಉಡಿಗೆ, ಆಟನೋಟ ಮೊದಲಾದುವುಗಳೆಲ್ಲ ಬೇರೆ ನಾವಿಕರೊಡನೆ ಒಂದೇ ಬಗೆಯಿಂದ ನಡೆಯುವಂತೆ ಏರ್ಪಾಡು ಆಗಿತ್ತು. ಜಾರ್ಜರಾಜಕುಮಾರನಿಗೆ ಅಣ್ಣನಮೇಲೆ ಪ್ರೀತಿ ಬಹಳ. ಜಾರ್ಜರಾಜಕುಮಾರನು ಒಮ್ಮೆ ಅಣ್ಣನನ್ನು ಕುರಿತು—ನೀವು ಮುಂದೆ ಅರಸ ರಾದ ಬಳಿಕ ಬಹಳ ಕಾರ್ಯಗಳಲ್ಲಿ ವ್ಯಗ್ರರಾಗಿರಬೇಕು; ಆದರೆ ನಾನು ನಿಮ್ಮ ನೆಳಲಿನಲ್ಲಿ ಅತ್ಯಂತ ಸುಖಕರವೂ, ಸಮ್ಮಾನಕರವೂ ಆದ ಕಾರ್ಯವನ್ನು- ಬ್ರಿಟಿಶ್ ಅಡ್ಮಿರಲ್ ಪದವಿಯನ್ನು—ಹೊಂದಿ ಸಾಗರದ ನಿರ್ಮುಕ್ತವಾತಾವರಣ ದಲ್ಲಿ ಆನಂದದಿಂದ ಕಾಲವನ್ನು ಕಳೆಯುವೆನು ಎಂದು ನುಡಿದನು. ಈತನು ನೌಕಾವಿದ್ಯೆಯಲ್ಲಿ ಡ್ರೆಡ್ನಟ್ ಹಡಗಿನ ಲೆಫ್ಟನಂಟ್ ಪದವಿಯನ್ನು, ಟಾರ್ಪೆಡೊ ಹಡಗಿನ ಕೆಪ್ಟನ್ ಪದವಿಯನ್ನು, ಗನ್‌ಬೋಟಿನ ಕೆಪ್ಟನ್ ಪದವಿಯನ್ನು (೧೮೯೧) ಹಡಗುಪಡೆಯ ಕಮ್ಯಾಂಡರ ಪದವಿಯನ್ನು ಕ್ರಮದಿಂದ ಪಡೆದನು. ರಾಜಪುತ್ರನೆಂದು ಸುಮ್ಮನೆ ಯಾವ ಪದವಿಯೂ ಕೊಡಲ್ಪಡಲಿಲ್ಲ; ಎಲ್ಲ ಕೆಲಸ ಗಳನ್ನು ತಾನೇ ಮಾಡಿ ನಿಷ್ಣಾತನಾದನು.

ನಮ್ಮ ನಾಡಿನಲ್ಲಿ "ಅವನಿಗೇನು? ಹೊಟ್ಟೆಬಟ್ಟೆಗಳಿಗೆ ಬೇಕಾದಷ್ಟಿದೆ; ಅವನೇನೂ ಕೆಲಸಮಾಡಬೇಕಾದುದಿಲ್ಲ" ಎಂದು ಸಾಮಾನ್ಯವಾಗಿ ಜನರು ನುಡಿಯುವರು. ಹೊಟ್ಟೆಬಟ್ಟೆಗಳಿಗಿಲ್ಲದವನಷ್ಟೇ ದುಡಿಯಬೇಕೆಂದೂ, ಇದ್ದವರು ಏನೂ ದುಡಿಯಬಾರದೆಂದೂ ಹಲವರ ಕಲ್ಪನೆಯುಂಟು. ನಿರುದ್ಯೋಗಿಯಾಗಿ ರುವುದಕ್ಕೆ ನಾವು ನಾಚುವುದಿಲ್ಲ; ಕೆಲಸ ಮಾಡುವುದಕ್ಕೆ ನಾಚುತ್ತೇವೆ! ದಿಲ್ಲಿಯ ಬಾದಶಹನಾದ ನಾಸಿರಉದ್ದೀನನು ಟೊಪ್ಪಿಗೆಗಳನ್ನು ಹೆಣೆದು ಉಪ ಜೀವನವನ್ನು ಸಾಗಿಸಿದನು; ಔರಂಗಜೇಬ ಬಾದಶಹನು ಕುರಾನದ ಪ್ರತಿಗ ಳನ್ನು ಬರೆದು ಉಪಜೀವನವನ್ನು ಸಾಗಿಸಿದನು. ಜರ್ಮನಿಯ ಬಾದಶಹನಾದ ೨ನೆಯ ಉಯಿಲ್ಯಮನು ಬೂಟುಗಳನ್ನು ಹೊಲಿಯುವ ಕೆಲಸವನ್ನು ಕಲಿತಿ ದ್ದನು. ಯುರೋಪಖಂಡದಲ್ಲಿ ನಿರುದ್ಯೋಗಿಗಳಿಗೆ ಸ್ವಲ್ಪವೂ ಗೌರವವಿಲ್ಲ.

ಪಂಚಮ ಜಾರ್ಜಬಾದಶಹರ ಮಕ್ಕಳಿಗೂ ಈ ತರದ ಒಳ್ಳೆಯ ಶಿಕ್ಷಣವೇ ದೊರೆತಿದೆ. ಇವರ ಹಿರಿಯ ಮಗನಿಗೆ ಎಡ್ವರ್ಡ ಅಲ್ಬರ್ಟ ಕ್ರಿಶ್ಚಿಯನ್‌ಜಾರ್ಜ ಅಂಡ್ರಪ್ಯಾಟ್ರಿಕ್ ಡೇವ್ಹಿಡ್ ಎಂಬ ಹೆಸರು. ಈ ರಾಜಕುಮಾರನು ೧೫ ವರ್ಷ ದವನಾಗುವ ವರೆಗೆ ಆತನ ಸ್ವಂತದ ಖರ್ಚಿಗೆ (ಪಾಕೆಟ್‌ಮನೀ) ವಾರಕ್ಕೆ ನಾಲ್ಕು ಆಣೆ ಮಾತ್ರ ಮಂಜೂರಾಗಿತ್ತು! ಅದರ ಲೆಕ್ಕವನ್ನು ಕೂಡ ಆತನು ಇಡಬೇಕು. ಪಾಟಣಾ ಪಟ್ಟಣದ ಒಬ್ಬ ನವಾಬನ ಮಗನಿಗೆ ಆತನು ೧೬-೧೭ ವರ್ಷದವ ನಾದಾಗ ತಿಂಗಳಿಗೆ ೩೦೦ ರೂ. ಸ್ವಂತದ ಖರ್ಚಿಗೆ ಕೊಡಲ್ಪಡುತ್ತಿತ್ತು. ಆತನು ಮುಂದೆ ತನ್ನ ತಂದೆತಾಯಿಗಳು ತನ್ನಮೇಲೆ ಮಾಡಿದ ಈ ತರದ ಅತಿ ಪ್ರೀತಿ ಯಿಂದಲೇ ಕೆಟ್ಟೆನೆಂದು ಹೇಳಿದನು.

ಕೆಲವು ವರ್ಷಗಳ ಹಿಂದೆ ಪಂಚಮ ಜಾರ್ಜ ಬಾದಶಹರ ಹಿರಿಯ ಮಗನು ಒಂದುದಿನ ಕಾಲೇಜಿನ ಪ್ರಿನ್ಸಿಪಾಲರು ಈ ದಿವಸ ಸಾಯಂಕಾಲ ಒಂದು ಗಾರ್ಡನ್ ಪಾರ್ಟಿಗೆ ಹೋಗುವದಕ್ಕೆ ಸೂಟಿಯನ್ನು ಬಿಡಲೊಲ್ಲರು; ತಾವು ಸ್ವಲ್ಪ ಬರೆದರೆ ಸೂಟಿಯನ್ನು ಬಿಡುವರು ಎಂದು ತಂದೆಯವರಿಗೆ ಪತ್ರ ಬರೆದನು. ಅದಕ್ಕೆ ಜಾರ್ಜಬಾದಶಹರು— ಪ್ರಿಯಪುತ್ರನೇ, ವರಿಷ್ಠರ ಎಲ್ಲ ತರದ ಅಪ್ಪಣೆ ( ಹುಕುಮು ) ಗಳನ್ನು ಆನಂದದಿಂದ ಹೇಗೆ ಪಾಲಿಸಬೇಕೆಂಬು ದನ್ನು ನೀನು ನಿನ್ನ ಉದಾಹರಣೆಯಿಂದ ಎಲ್ಲ ಹುಡುಗರಿಗೂ ಕಲಿಸಬೇಕೆಂದೇ ನಿನ್ನನ್ನು ಸಾರ್ವಜನಿಕ ಶಾಲೆಗೆ ಹಾಕಿರುವೆವು; ದೇಶಕ್ಕಾಗಿ ಅರಸುಮನೆತನದ ಈ ಕರ್ತವ್ಯವನ್ನು ಪಾಲಿಸುವ ಭಾರವು ಈಗ ನಿನ್ನ ತಲೆಯ ಮೇಲೆ ಇದೆ" ಎಂದು ಉತ್ತರವನ್ನು ಬರೆದರು.

ಇಂಗ್ಲಿಷರು ಏಕೆ ಘನತೆಯುಳ್ಳವರಾಗಿರುವರೆಂಬುದನ್ನು ಅವರ ಈ ಉದಾಹರಣಗಳಿಂದ ತಿಳಿಯಬಹುದು.

---

## ೮೦. ಉಚ್ಚಫಕೀರಮತ.

ಹಿಂದು ಸಂನ್ಯಾಸಿಗಳಾಗಲಿ, ಮುಸಲ್ಮಾನ ಫಕೀರರಾಗಲಿ ತೀವ್ರ ವೈರಾಗ್ಯವು ಉಂಟಾಗುವ ವರೆಗೆ ಸಾಧಾರಣ ಗೃಹಸ್ಥರಂತೆ ವಿಧಿ-ನಿಷೇಧಗಳನ್ನು ಪಾಲಿಸುತ್ತ ಅವರವರ ಸಮಾಜವನ್ನನುಸರಿಸಿ ನಡೆಯುವರು. ಅವರು ಶಾಟಿ, ಕೌಪೀನ ( ಅಲಖಾಲ್ಲಾ )ಗಳನ್ನು ಧರಿಸಿದ ಆ ಜಾತಿಯ ಗೃಹಸ್ಥಾಶ್ರಮಿಗಳೆಂದೇ ಹೇಳಬಹುದು. ಇವರು ಹೊರಗೆ ಭಿನ್ನ ಭಿನ್ನ ಧರ್ಮದವರೆಂದು ಕಾಣಿಸಿದರೂ ತೀವ್ರ ವೈರಾಗ್ಯಶಾಲಿಗಳಾದ ಈ ಸಂನ್ಯಾಸಿಗಳ, ಇಲ್ಲವೆ ಫಕೀರರ ಸಾಧನ ಮಾರ್ಗವೂ, ಮತವಿಚಾರವೂ ಒಳಗೆ ಒಂದೇ ವಿಧವಾಗಿರುವುವೆಂದು ಹೇಳಬಹುದು. ಮುಸಲ್ಮಾನ ಸಮಾಜದಲ್ಲಿ 'ಸುಫಿ' ಮತದ ಪ್ರಥಮ ಪ್ರವರ್ತಕನು ಮಹಾತ್ಮನಾದ ಅಲಿಯು. ಅವನ ವಂಶದ ಇಮಾಮರೇ ಫಕೀರ ಸಾಂಪ್ರದಾಯದ ಗೂಢಮಂತ್ರವನ್ನು ಉಪದೇಶಿಸುತ್ತ ಬಂದರು.

ಮನಸ್ಸಿನ ಏಕಾಗ್ರತೆಗಾಗಿ ಹಿಂದುಗಳಂತೆ ಮುಸಲ್ಮಾನ ಫಕೀರರೂ ನಾಸಿಕಾಗ್ರದಲ್ಲಿ ಇಲ್ಲವೆ ಭ್ರೂಮಧ್ಯದಲ್ಲಿ ದೃಷ್ಟಿಯನ್ನಿರಿಸಿ ಅಲ್ಲಾ ನಾಮವನ್ನು ಜಪಿಸುವರು. ಕೆಲವರು ದೃಷ್ಟಿಯ ಸ್ಥಿರತೆಗಾಗಿ ಇದಿರಿಗೆ ಯಾವದೊಂದು ವಸ್ತುವನ್ನಿಟ್ಟು ಅದರಲ್ಲಿ ಈಶ್ವರತೇಜಸ್ಸನ್ನು ಭಾವಿಸುವರು. ಈ ಪದ್ಧತಿಯನ್ನು ಅವರ ಮೌಲವಿಗಳು ಬುತ್‌ಪರಸ್ತಿ (ಮೂರ್ತಿಕಲ್ಪನೆ) ಎಂದು ಹಳಿದರೂ ಹಲವರು ಈ ಬಗೆಯಿಂದ ಏಕಾಗ್ರತೆಯನ್ನು ಪಡೆದು ಸಾಧನಮಾರ್ಗದಲ್ಲಿ ಮುಂದುವರಿಯುವರು. ಮುಸಲ್ಮಾನರಲ್ಲಿಯೂ ಉಚ್ಚವರ್ಗದ ಸಾಧಕರು, ಇಷ್ಟಮೂರ್ತಿಯಲ್ಲಿ ಪರಮೇಶ್ವರ ಕಲ್ಪನೆಯನ್ನು ಮಾಡಿಕೊಂಡು ಪೂಜಿಸುವುದು ಮನಃಸಂಯಮ, ಚಿತ್ತಶುದ್ಧಿಗಳನ್ನು ಪಡೆವುದಕ್ಕೆ ಅನುಕೂಲವಾದುದೆಂದು ಅಭಿಪ್ರಾಯಪಡುವರು. ಮೊದಮೊದಲು ನಿರಾಕಾರ-ಪರಮೇಶ್ವರನಲ್ಲಿ ಹಿಂದುಗಳಾಗಲಿ, ಮುಸಲ್ಮಾನರಾಗಲಿ ಸುಲಭವಾಗಿ ಮನವನ್ನಿರಿಸಲಾರರು. ಪ್ರಯತ್ನಾಂತ್ಯದಲ್ಲಿ ಆ ನಿರಾಕಾರನಾದ ಸರ್ವವ್ಯಾಪಿ ಪರಮೇಶ್ವರನ ಧ್ಯಾನವು ಸಾಧಿಸಿದ ಬಳಿಕ ಇಷ್ಟಮೂರ್ತಿಯಲ್ಲಿ ತಂದುಕೊಂಡಂತೆ ಎಲ್ಲ ಕಡೆಯಲ್ಲಿ—ಅಣು ರೇಣು ತೃಣಕಾಷ್ಠಗಳಿಂದಾರಂಭಿಸಿ ಮನುಷ್ಯರ ವರೆಗಿನ ಎಲ್ಲ ಪ್ರಾಣಿ, ಅಪ್ರಾಣಿಗಳಲ್ಲಿ—ಈಶ್ವರಭಾವನೆಯನ್ನು ತಂದುಕೊಳ್ಳಲಾಪರು. ಆಗ ಸಮಾಧಿಯ ಸುಖವು

ದೊರೆಯತೊಡಗುವುದು. ಈ ಸಿದ್ಧಿಯನ್ನು ಪಡೆದವರಿಗೆ ಪ್ರಪಂಚದಲ್ಲಿ ಅಗೋಚರವಾದುದು ಯಾವುದೂ ಉಳಿಯುವುದಿಲ್ಲ; ಅವರು ವಿಶ್ವಾತ್ಮನನ್ನು ವಿಶ್ವದ ಎಲ್ಲೆಡೆಗಳಲ್ಲಿ ಕಾಣುತ್ತ ಆತ್ಮಾನಂದವನ್ನು ಪಡೆಯುವರು.

ಈ ಉಚ್ಚವರ್ಗದ ಫಕೀರರು ಅನಂತವಾದ ವಿಶ್ವದ, ನಿರವಧಿಕವಾದ ಜ್ಞಾನದ, ಅಪಾರವಾದ ಆನಂದದ ಸಂಯುಕ್ತ ಪ್ರಕಾಶ (ನೂರ್) ವನ್ನು ತಮ್ಮ ಹೃದಯದಲ್ಲಿರಿಸುವರು. ಈ ಅನಂತವಾದವಿಶ್ವವನ್ನು ಕಂಡು ಆನಂದದಿಂದ "ಅಹಾ" ಎಂದು ಕೂಗುವರು. ಇದೇ ಮೇರೆಗೆ ಜ್ಞಾನ ಆನಂದಗಳ ಸಾಕ್ಷಾತ್ಕಾರವನ್ನು ಪಡೆದು ಅದು ಹೃದಯದಲ್ಲಿ ನೆಲೆಗೊಳ್ಳುವಂತೆ ಯತ್ನಿಸುವರು. ಭಕ್ತನು ವಿರಾಡ್ರೂಪನಾದ ಪರಮೇಶ್ವರನನ್ನು ತನ್ನ ಪೂಜೆಯ ಅನುಕೂಲತೆಗಾಗಿ "ಇಹಾಗಚ್ಛ, ಅತ್ರತಿಷ್ಠ" ಎಂದು ಒಂದು ಸಣ್ಣ ಪ್ರತಿಮೆಯಲ್ಲಿ ಆವಾಹಿಸುವಂತೆ ಆ ಪ್ರಯತ್ನವೆಂದು ಹೇಳಬಹುದು. ಇವರು ಜೀವಾತ್ಮನನ್ನು ರುಹ್ ಎಂದೂ, ಬ್ರಹ್ಮನಿರ್ವಾಣವನ್ನು ಫನಾಫಿಲ್ಲ ಎಂದೂ ಅನಂತವನ್ನು ಲಾ ಇಂತಿಹಾ ಎಂದೂ ಹೇಳುವರು. "ಏಕಮೇವಾದ್ವಿತೀಯಂ" ಬ್ರಹ್ಮವು—ಒಯಾಹೇದ್ ಎಂಬುದು—ಇವರ ಗುರಿಯು. ಇವರು ತಮ್ಮನ್ನು ಹಿಂದುಗಳಿಂದಲೂ, ಮುಸಲ್ಮಾನರಿಂದಲೂ ವಿಂಗಡಿಸಿಕೊಂಡು ಈ ಮೇರೆಗೆ ಹೇಳುವರು. "ಕಾಫೇರ್‌ಕೊ ಕುಫೂರ್ (ಮೂರ್ತಿಪರತೆ) ಭಾಲಾ; ಶೇಖಕೋ ಇಸ್ಲಾಮ್‌ಭಾಲಾ; ಹಮ್‌ಕೊ ದಿಲ್-ಆರಾಮ್ (ಪರಮಾನಂದ) ಭಾಲಾ"

ಸಮಸ್ತ ಜಗತ್ತನ್ನು ಈಶ್ವರನಿಂದ ಆವರಿಸಲ್ಪಟ್ಟುದನ್ನಾಗಿ ಕಾಣು; ಎಂಬುದು ಉಪನಿಷತ್ತಿನ ಉಪದೇಶವು. ಫಕೀರರೂ ಜಗತ್ತಿನ ಎಲ್ಲ ವಸ್ತುಗಳಲ್ಲಿಯೂ ಎಲ್ಲ ವ್ಯಾಪಾರಗಳಲ್ಲಿಯೂ ಸರ್ವವ್ಯಾಪಿ ಪರಮೇಶ್ವರನ ವ್ಯಾಪ್ತಿಯನ್ನು ಭಾವಿಸಲು ಅಭ್ಯಾಸಿಸುವರು. ಆತನೇ ಎಲ್ಲ ಕಡೆಗೂ ಇರುವನು; ಎಲ್ಲವೂ ಆತನೇ ಆಗಿರುವನು ಎಂಬ ಭಾವನೆಯಿಂದ ಸರ್ವೇಶ್ವರನ ಉಪಲಬ್ಧಿಯನ್ನು ಪಡೆಯಲು ಫಕೀರರೂ ಸನ್ಯಾಸಿಗಳೂ ಪ್ರಯತ್ನಿಸುವರು.

ಕಲ್ಪಾರ್ಣವ ಇವಾತ್ಯಂತ ಪರಿಪೂರ್ಣೈಕವಸ್ತುನಿ ।
ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ ಭಿದಾ ಕುತಃ ? ॥

ಅವರು ಹೇಳುವುದೇನೆಂದರೆ—ಅನಾಯೆಲ್ ಹಕ್ (=ಸೋಽಹಂ=ಆತನೇ ನಾನು) ಶಬ್ದವು ಬಾಯಿಂದ ಹೇಳುವ ಮಾತಲ್ಲ; ಅದು ಸಮಾಧಿಯಲ್ಲಿ ಗೋಚರವಾಗುವುದು. ಸಮಾಧಿಯ ಸ್ಥಿತಿಯು ಕೇವಲ ಮೌನಾವಸ್ಥೆಯು. ಆದುದರಿಂದ ಅದು (ಸೋಽಹಂ ಎಂಬುದು) ಕೇವಲ ಅನುಭವ ವಿಷಯವು. ಜಾಗ್ರದವಸ್ಥೆಯಲ್ಲಿ—ದ್ವೈತಭಾವವು ಸ್ಫುಟವಾಗಿ ಕಾಣಿಸುತ್ತಿರುವಾಗ—ಮತ್ತು ಯಾವಾಗ ಆ ಅನುಭವವು ಇರುವುದಿಲ್ಲವೋ ಆಗ ಆ ಮಾತನ್ನು ಬಾಯಿಂದ ಹೇಳುವುದಕ್ಕೆ ಯಾವ ಅಧಿಕಾರವೂ ಇಲ್ಲ. ಆ ಆನಂದಮಯಸ್ಥಿತಿಯು ಅಪರೋಕ್ಷಾನುಭವದ ಇಲ್ಲವೆ ಸ್ವಾನುಭವದ ವಿಷಯವು. ತರ್ಕಕೋಟಿಗಳಿಂದ ಎಳೆದಾಡುವ ವಿಷಯವಲ್ಲ. ಅದು ಬಾಯಿಂದ ಹೇಳಲುಬಾರದು. ಕೆಲವರು ಪ್ರತಿನಿಶ್ವಾಸಕ್ಕೆ ಈ ಅನಾಯೇಲ್‌ಹಕ್ ಮಂತ್ರದ (ಹಂಸ—ಇಲ್ಲವೆ ಸೋಽಹಂ ಮಂತ್ರದಂತೆ) ಜಪವನ್ನು ಮಾಡುವರು. ಆದರೆ ಯಾರಾದರೂ ಕೇಳಿದರೆ ದೇವರ ನಾಮಜಪವನ್ನು ಮಾಡುವೆವೆಂದು ಹೇಳುವರು. ಅದ್ವೈತಭಾವವನ್ನು ಪ್ರಕಟಿಸುವ ಫಕೀರಮತದ ಒಂದು ಹಿಂದಿಪದವುಂಟು—

ಆಪ್‌ಹಿ ಭಠಟಿ, ಆಪ್‌ಹಿ ಮಹುಯಾ, ಆಪ್‌ಹಿ ಚೂಲಾಯನ ಹಾರಾ।
ಆಪ್‌ಹಿ ಪಿಯೇ ಮಾತೋಯಾರಾ॥

ಹಾಜಿಮಹಮ್ಮದ ಉಮರನು ಜಬ್ಬಲಪುರದ ಒಬ್ಬ ಫಕೀರನು. ಆತನು ದೇಶದೇಶಗಳನ್ನು ಸಂಚರಿಸುತ್ತಿದ್ದನು. ಹಿಂದೆ ಹೇಳಿದ ಭಾವವನ್ನು ಆತನು ಸಂಸ್ಕೃತ ಶಬ್ದಗಳಿಂದಲೂ, ಅರಬಿಶಬ್ದಗಳಿಂದಲೂ ವಿವರಿಸಿ ಹೇಳುವನು— "ನೀನು ನೋಡುವ ವಸ್ತುಗಳಲ್ಲೆಲ್ಲ ಆ ಆನಂದಮಯನನ್ನು ಕಾಣು; ಏತರಿಂದಲೂ ಮನಸ್ಸಿಗೆ ವ್ಯಥೆಯನ್ನು ಮಾಡಿಕೊಳ್ಳದಿರು; ಮನಸ್ಸನ್ನು ತಣ್ಣಗೆ ಇಡು." ಇದು ಆತನ ಉಪದೇಶದ ಸಾರವು.

ಉಪಾಸನೆಯು (ನಮಾಜು) ಪರಾಭಕ್ತಿಯನ್ನು ಇಲ್ಲವೆ ಪೂರ್ಣಜ್ಞಾನವನ್ನು ವಿಕಾಸಗೊಳಿಸದಿದ್ದರೆ ಅದು ಕೇವಲ ವ್ಯರ್ಥವೆಂಬುದನ್ನು ತೋರಿಸುವುದಕ್ಕಾಗಿ ಆತನು ಹೇಳಿದುದೇನೆಂದರೆ—

ಓಜೂ (ನಮಾಜು ಮಾಡುವುದಕ್ಕೆ ಮುಂಚೆ ಕೈಕಾಲು ಮೋರೆಗಳನ್ನು ತೊಳೆದುಕೊಳ್ಳುವುದು.) ಮಾಡಿ, ಮಸೀದೆಗೆ ಹೋಗಿ ಅಲ್ಲಿ ತಲೆಯನ್ನು ಬಾಗಿಸಿದರೆ ಆಗುವುದೇನು? ಆಯುಷ್ಯದಲ್ಲಿ ಆತ್ಮಜ್ಞಾನವನ್ನು ಪಡೆಯಲಿಲ್ಲ; ಸತ್ತಬಳಿಕ ಯಾವುದೊಂದು ದೈವಿಕ ಉಪಾಯದಿಂದ ಆತ್ಮಜ್ಞಾನವು ಬಂದು ತಾನಾಗಿ ಆತನನ್ನು ಅಂಟಿಕೊಳ್ಳುವುದೋ?

ಕ್ಯಾ ಹೋತಾ ಹೈ ಓಜೂಕಿಯೇ ಸೇ।
ಕ್ಯಾ ಮಸ್‌ಜಿದ್‌ಮೇ ಜಾನೇ ಸೇ?
ಕ್ಯಾ ಹೋತಾಹೈ ನಮಾಜ ಪಢಕರ
ಸಿರ್ ಕೋ ಉಹಾ ಝುಕಾನೇಸೇ?
ಜೀತೇ ಜೀತೋ ಮಿಲಾ ನಹಿ
ಕ್ಯಾ ಮಿಲೆಗಾ ಉಹಮರ ಜಾನೇಸೇ?

ಜೀವನ್ಮುಕ್ತಿಯೇ ಮುಕ್ತಿಯು; ಚಿತ್ತಶುದ್ಧಿಯಾದ ಬಳಿಕ ವಾಸನಾಕ್ಷಯವನ್ನು ಪಡೆದು ಆತ್ಮಜ್ಞಾನವನ್ನು ಪಡೆಯುವುದೇ ಜೀವನ್ಮುಕ್ತಿಯು. ಯಾವನು ಸಾಕ್ಷಿಯಾಗಿದ್ದುಕೊಂಡು ನಿರ್ಲಿಪ್ತನಾಗಿರಬಲ್ಲನೋ ಆತನು ಬದುಕಿದ್ದರೂ, ಸತ್ತರೂ, ಮುಕ್ತನೇ ಸರಿ. ಶ್ರೀಮಚ್ಛಂಕರಾಚಾರ್ಯರು— "ನಸ್ನಾನೇನ ದಾನೇನ ಪ್ರಾಣಾಯಾಮ ಶತೇನವಾ" ಎಂದು ಈ ಆತ್ಮಜ್ಞಾನವು ದುರ್ಲಭವೆಂದೂ ಸ್ನಾನಾದಿಗಳಿಂದ ಕೇವಲ ಚಿತ್ತಶುದ್ಧಿಯು ದೊರೆಯಬಹುದೆಂದೂ ಹೇಳಿರುವರು.

ಯೋಗಯುಕ್ತಸ್ಥಿತಿಯು ಬರುವ ವಿಷಯದಲ್ಲಿ ಸಾಧುಗಳೂ ಫಕೀರರೂ ಏಕಾಭಿಪ್ರಾಯವುಳ್ಳವರಿರುವರು. ಮೃತ್ಯುಸಂಸಾರಸಾಗರದಲ್ಲಿ ಮುಳುಮುಳುಗಿ ಏಳುತ್ತಿರುವ ಮನುಷ್ಯರಲ್ಲಿ ಜೀವನ್ಮುಕ್ತನ ವಿಷಯವಾಗಿ ಫಕೀರರ ಮತವು:—

ಇಸ್ ದುನಿಯಾಮೇ ಆಕರ ಓಹಿ ಏಕ ಜೀತಾಹೈ।
ಯೋ ಜೀತೇ ಜೀಮರಯಾ ಓಯೇ ಓಹಿ ಏಕ ಜೀತಾಹೈ॥

ಈ ಫಕೀರ ಉಮರನು ಮಕ್ಕಾ ಮದೀನೆಗಳನ್ನು ನೋಡಿ ಬಂದಿದ್ದನು. ಆದರೆ ಅಲ್ಲಿಗೆ ಹೋದುದಕ್ಕಾಗಿ ನಾಚಿಕೊಳ್ಳುವನು. ಯಾವಾತನು ಎಲ್ಲೆಡೆಗ

ಳಲ್ಲಿರುವನೋ, ಹತ್ತಿರವೇ ಇರುವನೋ ಆತನನ್ನು ಹುಡುಕುವುದಕ್ಕಾಗಿ ಬಾಲಕ ನಂತೆ ದೂರದೇಶಕ್ಕೆ ಹೋಗಿದ್ದೆನಲ್ಲಾ ಎಂದು ಮೇಲೆಮೇಲೆ ಹೇಳುವನು. ವ್ಯಾಸಮುನಿಯು ಹದಿನೆಂಟು ಪುರಾಣಗಳನ್ನು ಬರೆದು ಕೊನೆಯಲ್ಲಿ ಇದೇ ಭಾವವನ್ನು ಪ್ರಕಟಿಸಿದನು:—

> ರೂಪಂ ರೂಪವಿವರ್ಜಿತಸ್ಯಭವತೋ ಧ್ಯಾನೇನ ಯದ್ವರ್ಣಿತಂ ।
> ಸ್ತುತ್ಯಾನಿರ್ವಚನೀಯತಾಖಿಲಗುರೋ ದೂರೀಕೃತಾ ಯನ್ಮಯಾ ॥
> ವ್ಯಾಪ್ತಿತ್ವಂ ಚ ವಿನಾಶಿತಂ ಭಗವತೋ ಯತ್ತೀರ್ಥಯಾತ್ರಾದಿನಾ ।
> ಕ್ಷಂತವ್ಯಂ ಜಗದೀಶ ತದ್ವಿಕಲತಾ ದೋಷತ್ರಯಂ ಮತ್ಕೃತಂ ॥

ಅರ್ಥ—ಪರಮೇಶ್ವರಾ, ನೀನು ರೂಪರಹಿತನು; ಆದರೆ ನಾನು ಧ್ಯಾನ ದಿಂದ ನಿನ್ನ ರೂಪವನ್ನು ವರ್ಣಿಸಲು ಪ್ರಯತ್ನಿಸಿದೆನು. ಎಲೈ ನಿಖಿಲಗುರೂ, ನೀನು ಅನಿರ್ವಚನೀಯನು; ಆದರೆ ನಾನು ಸ್ತುತಿಯಿಂದ ನಿನ್ನ ಆ ಅನಿರ್ವಚ ನೀಯತೆಯನ್ನು ಹೋಗಲಾಡಿಸಲು ಯತ್ನಿಸಿದೆನು; ದೇವಾ, ನೀನು ಸರ್ವ ವ್ಯಾಪಿಯು; ಆದರೆ ನಾನು ತೀರ್ಥಯಾತ್ರಾದಿಗಳ ಮಾಹಾತ್ಮ್ಯವನ್ನು ವರ್ಣಿಸಿ ನಿನ್ನ ವ್ಯಾಪಕತೆಯನ್ನು ಸಂಕೋಚಗೊಳಿಸಲು ಯತ್ನಿಸಿದೆನು. ಎಲೈ ಜಗದೀ ಶನೇ, ಈ ಪ್ರಯತ್ನಗಳಿಂದ ನಾನು ನಿನ್ನಲ್ಲಿ ನ್ಯೂನತಾರೋಪಣೆಯ ಮೂರು ತಪ್ಪುಗಳನ್ನು ಮಾಡಿದೆನು; ದಯಾಘನಾ ಅವನ್ನು ಕ್ಷಮಿಸು.

ಸಮಾಪ್ತ.





## ೭೧. ಇಬ್ರಾಹಿಮು ಆದಮ್.

ಅಹಂಭಾವವನ್ನು ನಿಃಶೇಷಗೊಳಿಸುವುದು.

ಬಲ್ಖದ ಅರಸು ಇಬ್ರಾಹಿಮ್ ಆದಮನು ಜ್ಞಾನೋಪದೇಶಕ್ಕಾಗಿ ಒಬ್ಬ ಪೀರನ ಬಳಿಯಲ್ಲಿ ಸೇವೆಮಾಡಿಕೊಂಡು ಇದ್ದನು. ಆ ಪೀರನ ಬಳಿಯಲ್ಲಿ ಹಲವು ಜನ ಶಿಷ್ಯರು ವಾಸವಾಗಿರುತ್ತಿದ್ದರು. ಇದಲ್ಲದೆ ದರ್ಶನಕ್ಕಾಗಿ ಅತಿಥಿಗಳೂ ಬರುತ್ತಿದ್ದರು. ಉಪದೇಶಕ್ಕಾಗಿ ಬಂದ ಶಿಷ್ಯರಿಗೆ ಗುರುವು ಬೇರೆ ಬೇರೆ ಕೆಲಸಗಳನು ನಿಯಮಿಸುವನು; ಆದಮನಿಗೆ ಅಹಂಭಾವವನ್ನು ತೊರೆಯಬೇಕೆಂದು ಉಪದೇಶಿಸಿ ಕಟ್ಟಿಗೆಯ ಹೊರೆಯನ್ನು ತರುವ ಕೆಲಸವನ್ನು ಹೇಳಿದ್ದನು. ಹಲವು ವರ್ಷಗಳು ಹೋದರೂ ಗುರುವು ಇಬ್ರಾಹಿಮನಿಗೆ ತತ್ತ್ವೋಪದೇಶಮಾಡಲಿಲ್ಲ. ಒಂದು ದಿವಸ ಅಡವಿಯಿಂದ ಕಟ್ಟಿಗೆ ಹೊರೆಯನ್ನು ಹೊತ್ತುಕೊಂಡು ದಣಿದು ಬಳಲಿಬಂದ ಇಬ್ರಾಹಿಮನು ಆ ಹೊರೆಯನ್ನು ಕೆಳಗೆ ಚೆಲ್ಲಿದ ಕೂಡಲೆ ಗುರುವು ಮೊದಲೇ ಹೇಳಿಟ್ಟ ಮೇರೆಗೆ ಅಡಿಗೆಯವನು ಈ ಕಟ್ಟಿಗೆಗಳು ಚೆನ್ನಾಗಿಲ್ಲವೆಂದು ಹೇಳಿ ಆತನ ಕೆನ್ನೆಗೆ ಬಲವಾಗಿ ಹೊಡೆದನು. ಆಗ ಇಬ್ರಾಹಿಮನು ಮೋರೆಯನ್ನು ಕೆಳಗೆ ಮಾಡಿಕೊಂಡು—'ನಾನು ಈಗ ಬಲ್ಖದಲ್ಲಿದ್ದರೆ ನೀನು ಈ ಮೇರೆಗೆ ಎಂದೂ ಮಾಡುತ್ತಿರಲಿಲ್ಲ' ಎಂದು ನುಡಿದನು.

ಗುರುವು ಬಳಿಕ ಪರೋಕ್ಷವಾಗಿ ಎಲ್ಲ ಸಮಾಚಾರವನ್ನು ಕೇಳಿಕೊಂಡನು. ಕೆಲವು ಕಾಲದ ತರುವಾಯ ಒಂದು ದಿವಸ ಇಬ್ರಾಹಿಮನು ಗುರುವಿಗೆ 'ಸ್ವಾಮೀ, ನನಗೆ ಇನ್ನೂ ತತ್ತ್ವೋಪದೇಶ ಮಾಡಲಿಲ್ಲವಲ್ಲ?' ಎಂದು ಕೇಳಿದನು. ಆಗ ಗುರುವು–'ತಮ್ಮಾ, ನಿನ್ನ ಮೈಗೆ ಇನ್ನೂ ಬಲ್ಖದ ವಾಸನೆ ಬಿಟ್ಟುಹೋಗಿಲ್ಲ. (=ಇನ್ನೂ ಬಲ್ಖದ ಅರಸುತನದ ಅಭಿಮಾನವು ಅಳಿದುಹೋಗಿಲ್ಲ.)' ಎಂದು ಹೇಳಿದನು. ಇಬ್ರಾಹಿಮನಿಗೆ ಆ ದಿನ ಅಡುವಳನು ಕೆನ್ನೆಗೆ ಬಡಿದಾಗ ತಾನಾಡಿದ ಮಾತು ನೆನಪಿಗೆ ಬಂದಿತು. ಮೋರೆಯ ಕೆಳಗೆ ಮಾಡಿ ಸುಮ್ಮನೆ ಕುಳಿತನು.

ಇಬ್ರಾಹಿಮನು ೩೬ ವರ್ಷ ಗುರುಕುಲವಾಸ ಮಾಡಿ ಕೊನೆಗೆ ತತ್ತ್ವಜ್ಞಾನವನ್ನು ಹೊಂದಿದನು. ಈ ಅವಧಿಯಲ್ಲಿ ಕಸಗುಡಿಸುವುದು ಮೊದಲಾದ ಬೇಕಾದ ಕೆಲಸ ಮಾಡುವುದಕ್ಕೂ ಆತನು ಹಿಂದು ಮುಂದೆ ನೋಡುತ್ತಿರಲಿಲ್ಲ. ಕೊನೆಕೊನೆಗೆ ಒಬ್ಬ 'ಭಂಗಿ' ಯು ಒದೆದರೂ ಕಲಕದಷ್ಟು ಅವನ ಮನಸ್ಸು ಶಾಂತವಾಗಿತ್ತು. ಗುರುವು, ಭೂಮಿಯು ಚೆನ್ನಾಗಿ ಹದವಾಗಿರುವುದನ್ನು ಕಂಡು ಬೀಜವನ್ನು ಬಿತ್ತಿದನು.

---

ಲೋಕಸೇವೆಯಲ್ಲಿ ತನ್ಮಯತೆ.

## ೭೨. ಘಾಟಕ ಗುರುನಾಥರಾಯರು.

ಲೋಕವು ಈಶ್ವರಾಧಿಷ್ಠಿತವೆಂದು—ಈಶ್ವರಸ್ವರೂಪವೆಂದು—ತಿಳಿಯುವ
ವನು ಲೋಕಸೇವೆಯನ್ನು ನಿರ್ಹೇತುಕವಾಗಿ ಮಾಡಬಲ್ಲನು; ಆತನು ಬೇರೆ
ಕಾರ್ಯಗಳಿಗಿಂತ ಈ ಲೋಕಸೇವಾಕಾರ್ಯವನ್ನು ದೊಡ್ಡದನ್ನಾಗಿ ತಿಳಿಯು
ವನು; ಆದುದರಿಂದಲೇ ಸ್ವಾರ್ಥಕ್ಕೆ ಹಾನಿಯೊದಗಿದರೂ ಅದನ್ನು ಲೆಕ್ಕಿಸದೆ
ತಾನು ಕೈಕೊಂಡ ಲೋಕಕಾರ್ಯದಲ್ಲಿ ತನ್ಮಯನಾಗಿ ದುಡಿಯುವನು.

ಧಾರವಾಡ ನಾಡಿನಲ್ಲಿ ಕೈ. ಘಾಟಕ ಗುರುನಾಥರಾಯರನ್ನರಿಯದವರ
ವಿರಳ. ಇವರು ಕಟ್ಟಿಸಿದ ಸಂಸ್ಕೃತ ಪಾಠಶಾಲೆಯು ಇವರ ಕೀರ್ತಿಧ್ವಜ
ದಂತೆ ಧಾರವಾಡದಲ್ಲಿ ಹಾಲಗೆರೆಯ ದಂಡೆಯ ಮೇಲೆ ಮೆರೆಯುತ್ತಿದೆ.

ಧಾರವಾಡ ನಾಡಿನಲ್ಲಿ ಸಂಸ್ಕೃತಭಾಷೆಯ ಅಧ್ಯಯನವು ಚೆನ್ನಾಗಿ ನಡೆ
ಯದಿರುವುದನ್ನು ಕಂಡು ಇಲ್ಲಿಯ ಜನರಿಗೆ ಸಂಸ್ಕೃತದ ಅಧ್ಯಯನಕ್ಕೆ ಅನು
ಕೂಲತೆಯನ್ನುಂಟುಮಾಡಬೇಕೆಂದು ಈ ಮಹನೀಯರು ಅಹೋರಾತ್ರಿ ಶ್ರಮ
ಪಟ್ಟು ಜನರಿಂದ ಕಾಸುಕಾಸುಗಳಂತೆ ದುಡ್ಡನ್ನು ಶೇಖರಿಸಿ ಒಂದು ಸುಂದರ
ವಾದ ಕಟ್ಟಡವನ್ನು ಕಟ್ಟಿಸಿ ಅದರಲ್ಲಿ ಸಂಸ್ಕೃತಭಾಷೆಯ ವ್ಯಾಸಂಗವು ಅವ್ಯಾ
ಹತವಾಗಿ ನಡೆಯುವಂತೆ ಅಧ್ಯಾಪಕರು ಮೊದಲಾದ ಯೋಜನೆಯನ್ನು ಮಾಡಿ
ನಮ್ಮ ಮೇಲೆ ಅನಂತೋಪಕಾರಗಳನ್ನು ಮಾಡಿದರು. ಮಹಾರಾಷ್ಟ್ರ ನಾಡಿ
ನಿಂದ ನ್ಯಾಯಶಾಸ್ತ್ರ ಮುಂತಾದ ವಿಷಯಗಳನ್ನೋದುವುದಕ್ಕೆ ಅಲ್ಲಿ ಗತಿಯಿಲ್ಲದ
ವಿದ್ಯಾರ್ಥಿಗಳು ಇಲ್ಲಿಗೆ ಬರುತ್ತಿರುವದನ್ನು ನೋಡಿ ನಾವು ಅಭಿಮಾನಪಡುತ್ತಿರು
ವುದಕ್ಕೆ ಗುರುನಾಥರಾಯರು ಕಾರಣವೆಂಬುದನ್ನು ಮರೆಯಕೂಡದು.

ಇವರು ವಕೀಲಿಯ ಕೆಲಸವನ್ನು ಮಾಡುತ್ತಿರುವಾಗ ತಮ್ಮ ವಕೀಲಿಯ
"ಫೀ ಬಯಾನು" ಗಳನ್ನು ತೆಗೆದುಕೊಳ್ಳುವುದಕ್ಕೆ ಮೊದಲು ಪಾಠಶಾಲೆಯ
ಚಂದಾಹಣವನ್ನು ಕೇಳುವರು. ಹೆಚ್ಚು ಹಣವನ್ನು ಕೊಟ್ಟವರನ್ನು ಹೇಗೋ
ಹಾಗೆಯೇ ಒಂದು ಪೈಯನ್ನು ಕೊಟ್ಟವರನ್ನು ಕೂಡ ಇವರು ಪಾಠಶಾಲೆಯ
ಹಿತದವರೆಂದು ಆದರಿಸುವರು. ತಮ್ಮ ವಕೀಲಿಯ ಸಂಭ್ರಮದ ಕಾಲದಲ್ಲಿ
ಕೂಡ ಇವರು ಪ್ರತಿದಿವಸ ಪಾಠಶಾಲೆಗೆ ಹಣಕೂಡಿಸುವುದರಲ್ಲಿ ಬಹಳ ವೇಳೆ
ಯನ್ನು ಕಳೆಯುತ್ತಿದ್ದರು.

ಧಾರವಾಡದಲ್ಲಿ ವಕೀಲರಾಗಿದ್ದ ಬೆಟದೂರು ಬಳವಂತರಾಯರಿಗೂ ಗುರುನಾಥರಾಯರಿಗೂ ಬಹುದಿವಸಗಳಿಂದ ಸ್ನೇಹವಿತ್ತು. ಬಳವಂತರಾಯರು ಇವರ ದಾರ್ಢ್ಯವನ್ನು ಪರೀಕ್ಷಿಸಲೋಸುಗ ಇವರು ಚಂದಾಹಣವನ್ನು ಕೇಳಿದಾಗಳೆಲ್ಲ ಯಾವುದೊಂದು ನೆವವನ್ನು ಹೇಳುವರು. ಒಂದು ದಿನ ರಾತ್ರಿ ೯ ಗಂಟೆಗೆ ಬರಹೇಳಿದರೆ ಇನ್ನೊಂದು ದಿನ ಬೆಳಗಿನ ೬ ಗಂಟೆಗೆ ಬರಹೇಳುವರು. ಒಮ್ಮೆ ಚಿಲ್ಲರು ಹಣವಿಲ್ಲವೆಂದು ಹೇಳಿದರೆ ಇನ್ನೊಮ್ಮೆ ಪೆಟ್ಟಿಗೆಯ ಬೀಗದ ಕೈ ಕಳೆದಿರುವುದೆಂದು ಹೇಳುವರು. ಆದರೆ ಗುರುನಾಥರಾಯರು ಅವರು ಹೇಳಿದ ವೇಳೆಗೆ ಸರಿಯಾಗಿ ಅವರ ಮನೆಯ ಇದಿರಿಗೆ ಹೋಗಿ ನಿಲ್ಲುವರು. ಬಳವಂತರಾಯರು ಬೇಸತ್ತು ಹೋದರು. ಕೊನೆಗೆ ಅವರು ಇಷ್ಟು ಬಾರಿ ಅಲೆದಾಡಿಸಿ ಒಂದು ಪೈಯನ್ನು ಕೊಟ್ಟು ಗುರುನಾಥರಾಯರನ್ನು ರೇಗಿಸಬೇಕೆಂದು ಯೋಚಿಸಿದರು. ಇತ್ತ ಗುರುನಾಥರಾಯರು ಅವರಿಂದ ಒಂದು ಪೈಯನ್ನಾದರೂ ಸಂಪಾದಿಸಬೇಕೆಂದೂ, ಈ ದಿವಸ ಅವರು ಯಾವ ನೆವವನ್ನು ಹೇಳಿದರೂ ನಡೆಯಗೊಡಬಾರದೆಂದೂ ಯೋಚಿಸಿ, ಒಂದು ದಿವಸ ಅವರು ಹೇಳಿದ ವೇಳೆಗೆ ಅವರ ಮನೆಗೆ ಹೋದರು. ಬಳವಂತರಾಯರು ಮೊದಲೇ ಯೋಚಿಸಿದಂತೆ ೧೦೦ ರೂಪಾಯಿಗಳ ನೋಟನ್ನು ತೋರಿಸಿ ಒಂದು ಪೈಯನ್ನು ನಿಮಗೆ ಕೊಡುವವನಿದ್ದೇನೆಂದೂ, ಆದರೆ ಚಿಲ್ಲರು ನನ್ನ ಬಳಿಯಲ್ಲಿ ಏನೂ ಇಲ್ಲವೆಂದೂ ಹೇಳಿದರು. ಕೂಡಲೆ ಗುರುನಾಥರಾಯರು ೯೯ರೂ. ೧೫ಆ. ೧೧ ಪೈ ಹಣವನ್ನು ಬಳವಂತರಾಯರಿದಿರಿಗಿಟ್ಟು ನೋಟನ್ನು ಕೇಳಿದರು. ಗುರುನಾಥರಾಯರು, 'ಮೊದಲೇ ಈ ದಿವಸ ಯಾವ ನೆವವನ್ನು ಹೇಳಿದರೂ ನಡೆಯಗೊಡಬಾರದೆಂದು' ಯೋಚಿಸಿ ಚಿಲ್ಲರು ಹಣವನ್ನು ಕಟ್ಟಿಕೊಂಡೇ ಹೋಗಿದ್ದರು. ಬಳವಂತರಾಯರು ತಾವು ಸೋತೆವೆಂದು ಒಪ್ಪಿಕೊಂಡರು. "ಬಹುಪ್ರಯತ್ನದಿಂದ ಸಂಪಾದಿಸಿದ ಪೈ" ಎಂದು ಗುರುನಾಥರಾಯರು ಅದನ್ನು ಪಾಠಶಾಲೆಯ ಲೆಕ್ಕದ ಪುಸ್ತಕದಲ್ಲಿ ಆದರದಿಂದ ಜಮೆಮಾಡಿಕೊಂಡುದುಂಟೆಂದು ಆ ಲೆಕ್ಕದ ಪುಸ್ತಕಗಳನ್ನು ನೋಡಿದವರು ಹೇಳುವರು.

---

ತಾಯ್ನಾಡಿನ ಋಣಶೋಧ.

## ೭೩. ದಿ. ಬ. ರೊದ್ದರಾಯರು.

ನಾಡಿನ ಗರಜುಗಳನ್ನು ಸರಕಾರಕ್ಕೆ ಸರಿಯಾಗಿ ತಿಳಿಯಿಸಿ, ಆದರಿಂದ ಅನುಕೂಲತೆಗಳನ್ನು ಮಾಡಿಸಿಕೊಂಡು ದೇಶಹಿತವನ್ನು ಮಾಡಿದವರಲ್ಲಿ ಮುಂಬಯಿ ಕರ್ನಾಟಕದಲ್ಲಿ ರೊದ್ದರಾಯರು ಅಗ್ರಗಣ್ಯರೆಂದು ಹೇಳಬಹುದು.

ರಾಯರು, ತಮ್ಮ ವಿಲಕ್ಷಣವಾದ ಸ್ಮರಣಶಕ್ತಿ, ಅಸಾಧಾರಣವಾದ ಉತ್ಸಾಹ, ಅಸಾಮಾನ್ಯವಾದ ಕರ್ತೃತ್ವಶಕ್ತಿ ಮೊದಲಾದ ಗುಣಗಳಿಂದ ಬಹಳ ಮುಂದುವರಿದರು. ಎಲ್ಲರೂ ತನ್ನವರೆಂದು ಅಭಿಮಾನಪಟ್ಟು ಕೈಯಲ್ಲಾದ ಮಟ್ಟಿಗೆ ಸಹಾಯಮಾಡುವ ಅವರ ದಯಾಗುಣವು ಅತ್ಯಂತ ಶ್ಲಾಘ್ಯವು.

ರಾಯರು ಬಾಲ್ಯದಲ್ಲಿ ಬಡತನದೊಡನೆ ಹೋರಾಡಿ ವಿದ್ಯಾಭ್ಯಾಸ ಮಾಡಿದರು. ತಾರುಣ್ಯದಲ್ಲಿ ಸರಕಾರದ ಮಾನ್ಯವಾದ ನೌಕರಿಯನ್ನು ಏಕ ನಿಷ್ಠೆಯಿಂದ ಮಾಡಿ ದೇಶಸೇವೆಗೆ ಅರ್ಹತೆಯನ್ನು ಸಂಪಾದಿಸಿಕೊಂಡರು. ಪ್ರೌಢವಯಸ್ಸಿನಲ್ಲಿ ಒಂದು ಜಿಲ್ಹೆಯ ಡೆ. ಎಜ್ಯು. ಇನ್ಸಪೆಕ್ಟರರಾಗಿಯೂ, ಶಿಕ್ಷಕಶಿಕ್ಷಣಾಲಯದ ಪ್ರಿನ್ಸಿಪಾಲರಾಗಿಯೂ ಜನತೆಯ ವಿದ್ಯಾಭಿವೃದ್ಧಿಯ ಕೆಲಸವನ್ನು ಬಹು ಸಮರ್ಪಕವಾಗಿ ಮಾಡಿದರು. ನೌಕರಿಯಿಂದ ನಿವೃತ್ತರಾದ ಬಳಿಕ ಜನಪದ ಸಭೆ ( ಲೋಕಲ್‌ಬೋರ್ಡ್ ) ನಗರ ಸಭೆ ( ಮ್ಯುನಸಿಪ್ಯಾಲಿಟಿ ) ಮೊದಲಾದುವುಗಳಲ್ಲಿ ಅಧ್ಯಕ್ಷರಾಗಿ, ಹರಯದವರಲ್ಲಿಯೂ ಕಾಣಬಾರದ ಹುರುಪಿನಿಂದ ಮಾಡಿದ ಜನಹಿತಕಾರ್ಯಗಳು ವರ್ಣನೀಯವಾಗಿವೆ. ಈ ಎಲ್ಲ ಕಾರ್ಯಗಳಿಂದ ಅವರು ತಮ್ಮ ತಾಯ್ನಾಡಿನ ಋಣವನ್ನು ಬಹುಮಟ್ಟಿಗೆ ತೀರಿಸಿದರೆಂದು ಹೇಳಬಹುದು. ಆದರೆ ಅವರು ಮಾಡಿದ ಋಣಶೋಧನಕಾರ್ಯದ ಮಹತ್ವದ ಭಾಗವು ಅವರ ವೃದ್ಧಾಪ್ಯದಲ್ಲಿಯೇ ಜರುಗಿತು.

೭೦ ವರ್ಷಗಳ ವಯಸ್ಸು; ಅನೇಕರು ಮುಪ್ಪಿನ ಅರವುಮರವಿನಿಂದ ಸಾಂಸಾರಿಕ ವ್ಯವಹಾರಗಳಿಗೂ ಹೊಯ್ದಾಡುವ ಕಾಲವು. ಸುತ್ತಲು ಮುಂದಾಳುತನಕ್ಕಾಗಿ ಮೇಲಾಟದಿಂದ ಕಾಲ್ತೊಡಕಾಗುವವರು ಹಲವರು. ಇಂತಹ ಪರಿಸ್ಥಿತಿಯಲ್ಲಿ ರಾಯರು ಊರೂರಿಗೆ ಹೋಗಿ ದ್ರವ್ಯನಿಧಿಯನ್ನು ಶೇಖರಿಸಿ ಕರ್ನಾಟಕ ಕಾಲೇಜಿನ ಸ್ಥಾಪನೆಯಂತಹ ಮಹತ್ತ್ವದ ಕಾರ್ಯವನ್ನು ನೆರವೇರಿಸಿ ತಮ್ಮ ನಾಡಿನ ಮಕ್ಕಳ ಉಚ್ಚ ಶಿಕ್ಷಣದ ಅನುಕೂಲತೆಯನ್ನೊದಗಿಸಿದರು. ಈ ಮೇರೆಗೆ ಸಮಗ್ರಾಯುಷ್ಯವನ್ನು ಲೋಕಹಿತಸತ್ಕಾರ್ಯಗಳಲ್ಲಿ ವ್ಯಯ ಮಾಡಿ, ತಾಯ್ನಾಡಿನ ಋಣಶೋಧವನ್ನು ಪೂರ್ಣವಾಗಿ ಮಾಡಿದ ಕರ್ನಾಟಕ ಮಾತೆಯ ಸತು ... ಹೊಂದಿದರು.

ಹ ... ಇರುವರು. ಆದರೆ ರೊದ್ದ ರಾಯರು ... ಕನ್ನಡನಾಡಿನ ತರುಣ ಕಣ್ಣಿದಿರಿಗ ...



